# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೨–೧೩ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# “ಬಸವಣ್ಣನವರ ವಚನಗಳಲ್ಲಿ ನೈತಿಕ ಪ್ರಜ್ಞೆ”

ನಿಬಂಧಕಾರರು

ನೋಂದಣಿ ಸಂಖ್ಯೆ : **KVTMKS - 00608**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ.)



೨೦೧೨ – ೧೩

# ಕನ್ನಡ ವಿಶ್ವವಿದ್ಯಾಲಯ

## ಹಂಪಿ

೨೦೧೨–೧೩ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# "ಬಸವಣ್ಣನವರ ವಚನಗಳಲ್ಲಿ ನೈತಿಕ ಪ್ರಜ್ಞೆ"


**ನಿಬಂಧಕಾರರು**

ನೋಂದಣಿ ಸಂಖ್ಯೆ : KVTMKS - 00608

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ.)


೨೦೧೨ – ೧೩

# ಬಸವಣ್ಣನವರ ವಚನಗಳಲ್ಲಿ ನೈತಿಕ ಪ್ರಜ್ಞೆ

## ಪ ರಿ ವಿ ಡಿ



*****

# ಅಧ್ಯಾಯ – ೧

## ಅಧ್ಯಯನದ ಸ್ವರೂಪ ಮತ್ತು ಉದ್ದೇಶ

ಎರಡು ಸಾವಿರ ವರ್ಷಗಳಿಗೂ ಮಿಗಿಲಾದ ಇತಿಹಾಸವುಳ್ಳ ಕನ್ನಡ ಸಾಹಿತ್ಯವು ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ತನ್ನದೇ ಆದ ನೆಲೆ ಬೆಲೆ ವೈಶಿಷ್ಟ್ಯಗಳೊಡನೆ ಮುನ್ನೆಡೆದಿರುವುದು ಸರ್ವವಿಧಿತ. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ನಾಲ್ಕು ಘಟ್ಟಗಳಲ್ಲಿ ಸಾಗಿರುವ ಕನ್ನಡ ಸಾಹಿತ್ಯದ ಕೃಷಿ ತುಂಬಾ ಹುಲುಸಾದುದಾಗಿದೆ. ಈ ನಾಲ್ಕು ಘಟ್ಟಗಳಲ್ಲಿ ಹುಟ್ಟಿಕೊಂಡ ಜೈನ ಸಾಹಿತ್ಯ, ವಚನಸಾಹಿತ್ಯ, ದಾಸಸಾಹಿತ್ಯ, ಜನಪದಸಾಹಿತ್ಯಗಳ ಕೊಡುಗೆ ಅಪಾರ, ಅನನ್ಯ. ಈ ಒಂದೊಂದು ಪ್ರಕಾರವೂ ತನ್ನದೇ ಆದ ರೀತಿಯಲ್ಲಿ ವಿಶಿಷ್ಟವೂ, ವೈವಿದ್ಯವೂ ಆಗಿದ್ದು, ತಮ್ಮ ಕಾಲದ ಸಾಮಾಜಿಕ ಸಂದರ್ಭಗಳಿಗೆ ತಕ್ಕಂತೆ ಸ್ಪಂದಿಸಿರುವುದನ್ನು ನಾವು ಮನಗಾಣಬಹುದಾಗಿದೆ.

"ವಚನಗಳು ಮೂಡಿಬಂದ ಕಾಲವು ಕರ್ನಾಟಕ ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ತುಂಬಾ ಮಹತ್ವಪೂರ್ಣವಾದುದು. ಸಾಹಿತ್ಯದ ದೃಷ್ಟಿಯಿಂದಲೂ ಅತ್ಯಂತ ಮಹತ್ವದ ಮಾರ್ಪಾಡುಗಳಿಗೆ ಎಡೆಮಾಡಿಕೊಟ್ಟ ಕಾಲವಿದು. ಆಯಾ ಕಾಲಸ್ಥಿತಿಗನುಗುಣವಾಗಿ ಸಾಹಿತ್ಯದ ಸ್ವರೂಪವು ಮಾರ್ಪಾಡು ಹೊಂದುತ್ತದೆಂಬುದನ್ನು ನಮ್ಮ ಸಾಹಿತ್ಯ ಇತಿಹಾಸವನ್ನು ಪರಿಶೀಲಿಸುವುದರಿಂದ ತಿಳಿಯಬಹುದು. ಹೀಗಾಗಿ ವಚನಗಳು ತಮ್ಮ ಹಿಂದಿನ ಕಾಲದ ಬರಹಕ್ಕಿಂತ ಸಂಪೂರ್ಣ ಭಿನ್ನ ಸ್ವರೂಪವನ್ನು ಪಡೆದ ಸಾಹಿತ್ಯವಾಗಲೂ ಕಾರಣ ಆಗಿನ ಸಾಮಾಜಿಕ ಪರಿಸ್ಥಿತಿ ಹಾಗೂ ಸಾಮಾಜಿಕ ಆಂದೋಲನಗಳು"[೧]

ಜನಸಾಮಾನ್ಯರ ದನಿಗೆ ಶಬ್ದವನ್ನು ತುಂಬಿದ್ದು ನಮ್ಮ ವಚನಕಾರರು, ನಮ್ಮ ಕಾಲದಲ್ಲಿದ್ದ ರೂಢಮೂಲ ಸಮಾಜದ ವ್ಯವಸ್ಥೆಯನ್ನು ಧಿಕ್ಕರಿಸಿ ನವಸಮಾಜ ರಚನೆಯ ಆದರ್ಶವನ್ನು ಹೊಂದಿ ವಚನ ರಚನೆಯಲ್ಲಿ ತೊಡಗಿದರು. ರಾಜನಲ್ಲಿ ಹಿರಿಯ ಹುದ್ದೆಯನ್ನು ಪಡೆದಿದ್ದ ಬಸವಣ್ಣನಿಂದ ಹಿಡಿದು ಅಂಬಿಗನಾದ ಚೌಡಯ್ಯ ತುರುಗಾಹಿ ರಮಣ್ಣ, ಮೋಳಿಗೆ ಮಾರಯ್ಯ, ವಿರಾಗಿಯಾದ ಅಲ್ಲಮ, ಸಾಮಾಜಿಕ ನಿರ್ಬಂಧಗಳನ್ನೆಲ್ಲ ಕೆಚ್ಚೆದೆಯಿಂದ ಕಳಚಿ ಬಂದು ಸ್ವಾತಂತ್ರ್ಯವನ್ನು ಮೆರೆದ

---

೧. ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೨, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ. ಪು. ೩೧.

ಮಹಾದೇವಿಯಕ್ಕ ಇತ್ಯಾದಿ ವಿವಿಧ ಸಾಮಾಜಿಕ ಸ್ತರಕ್ಕೆ ಸೇರಿದ ವಿವಿಧ ವೃತ್ತಿಗಳನ್ನು ಅವಲಂಬಿಸಿದ ಅನೇಕ ಮನೋಭಾವದ ಜನರೆಲ್ಲ ವಚನ ರಚನೆಯಲ್ಲಿ ತೊಡಗಿದ್ದುದರಿಂದ ಇಡೀ ವಚನ ಸಾಹಿತ್ಯವನ್ನು ಗಮನಿಸಿದರೆ ಆ ಕಾಲದ ಸಾಮಾನ್ಯರ ಚಿತ್ರಣ. ಅವರ ನಿಲುವುಗಳು ತಿಳಿಯುತ್ತವೆ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯವಂತೂ ಇಡೀ ವಿಶ್ವಸಾಹಿತ್ಯಕ್ಕೆ ಕನ್ನಡ ಸಾಹಿತ್ಯವು ನೀಡಿರುವ ಕೊಡುಗೆಯಾಗಿದೆ.

ಸಾರ್ವಕಾಲಿಕವೂ, ಸರ್ವಜನಾದರಣೀಯವೂ, ವಿಶ್ವಮಾನ್ಯವೂ ಆದ ವಿಚಾರಗಳನ್ನು ಬಿತ್ತರಿಸಿದ ಈ ವಚನ ಸಾಹಿತ್ಯ ಇಡೀ ವಿಶ್ವ ಸಾಹಿತ್ಯ ಸಂದರ್ಭದಲ್ಲಿಯೇ ತುಂಬಾ ವಿಶಿಷ್ಟವೂ, ವಿಭಿನ್ನವೂ ಆದುದಾಗಿದೆ. ಅಂದಿನ ಶರಣರ ಪಾಲಿಗೆ ಈ ಲೋಕವೇ ಒಂದು ಉತ್ಸವ ಮೂರ್ತಿಯಾಗಿತ್ತು. ಅದನ್ನು ಪೂಜಿಸಿದಷ್ಟು, ಮೆರೆಯಿಸಿದಷ್ಟು ಗೌರವಿಸಿದಷ್ಟು ಮೂಲಮೂರ್ತಿಯಾದ ಭಗವಂತನಿಗೆ ತೃಪ್ತಿ-ಯಾಗುತ್ತದೆ ಎಂದು ನಂಬಿದ್ದವರು, ಅರಿತಿದ್ದವರಾಗಿದ್ದರು ಸ್ವರ್ಗಲೋಕ ಮರ್ತ್ಯಲೋಕವೆಂಬುದು ಬರೀ ಶಬ್ಧ ವ್ಯಾಮೋಹ ಅಷ್ಟೇ. ನಮ್ಮ ಕಣ್ಣಮುಂದೆ ರಾಚಿಕೊಂಡಿರುವ ಬದುಕೇ ಸರ್ವಸ್ವ ಅದನ್ನು ಸಹ್ಯ ಸುಂದರವನ್ನಾಗಿ ಮಾಡಿಕೊಳ್ಳಬೇಕು ಎಂಬುದು ಅವರ ನಿಲುವು ಆಗಿತ್ತು. ಹಾಗಾಗಿ ಅವರು ಸಾಹಿತ್ಯವನ್ನು ಬರೆಯಬೇಕೆಂದು ಬರೆದವರಲ್ಲ, ಆ ಕಾರಣದಿಂದಲೇ ಅವರ ಸಾಹಿತ್ಯಕ್ಕೆ ಸಾಮಾಜಿಕ ಬದ್ಧತೆ ಇತ್ತು. ಮಾನವೀಯ ಕಾಳಜಿಯ ಸ್ಪರ್ಶವಿತ್ತು ಎನ್ನುವುದನ್ನು ನಾವು ಮರೆಯುವಂತಿಲ್ಲ. ನಿಜ ಹೇಳಬೇಕೆಂದರೆ ಅವರು ಲೋಕಕಲ್ಯಾಣದಲ್ಲಿ ಆತ್ಮಕಲ್ಯಾಣ ಬಯಸಿದ ಮಹಾನುಭಾವರು. ಅವರದು ಕೇವಲ ಅನುಭಾವಜನ್ಯವಾದ ಸಾಹಿತ್ಯದಲ್ಲಿ ಅದು ಅನುಭಾವ ಸಾಹಿತ್ಯ.

ದಯವಿಲ್ಲದ ಧರ್ಮವದೇವುದಯ್ಯಾ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯು
ದಯವೇ ಧರ್ಮದ ಮೂಲವಯ್ಯ
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ

ಎಂದು ಜನತಾ ಧರ್ಮದ ಆಶಯವನ್ನು ಸಾರಿದ ಬಸವಣ್ಣನನ್ನು ಮುಖ್ಯವಾಗಿಟ್ಟುಕೊಂಡು ೧೨ನೇ ಶತಮಾನದ ನೈತಿಕ ಪ್ರಜ್ಞೆಯನ್ನು ಬಸವಣ್ಣನವರ ವಚನಗಳ ಮೂಲಕ ಅಧ್ಯಯನ ಮಾಡುವ ಪ್ರಯತ್ನವನ್ನು ಈ ನಿಬಂಧದಲ್ಲಿ ಮಾಡಲಾಗಿದೆ. ವಿಶ್ವದ ಬಹುಪಾಲು ಧರ್ಮಗಳ ಅನುಯಾಯಿಗಳು

ಬಾಹ್ಯಾಚರಣೆಯಲ್ಲಿಯೆ ಬದುಕನ್ನು ಸವೆಸುತ್ತಾರೆ. ಧರ್ಮದ ನಿಜಾಚರಣೆಯಿಂದ ಮಾತ್ರ ನಾವು ಧರ್ಮವನ್ನು ರಕ್ಷಿಸಬಲ್ಲೆವು. ಆಗ ಆ ಧರ್ಮ ನಮ್ಮನ್ನು ರಕ್ಷಿಸಬಲ್ಲುದು. ಅಂದರೆ ನಾವು ಸತ್ಯಾವಂತರಾಗಿ ಸದ್ಭಾವನೆ ಮತ್ತು ಸದ್ವರ್ತನೆಗಳೊಂದಿಗೆ ಬದುಕಿದಾಗ ಮಾತ್ರ ನಿಜಾಚರಣೆಯೊಂದಿಗೆ ಬದುಕಿದಂತಾಗುವುದು. ವಿವಿಧ ಧರ್ಮಗಳ ಬಾಹ್ಯಾಚರಣೆಗಳು ಬೇರೆಬೇರೆಯಾಗಿರುತ್ತವೆ. ಆದರೆ ಎಲ್ಲ ಧರ್ಮಗಳ ಒಳಗೆ ಒಂದೇ ವಿಶ್ವಧರ್ಮವಿರುತ್ತದೆ. ಅದು ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವಂಥದ್ದಾಗಿರುತ್ತದೆ. ವಿವಿಧ ಧರ್ಮಗಳ ಬಾಹ್ಯಾಚರಣೆ ಬೇರೆ ಬೇರೆ ಇದ್ದರೂ ಅವು ಮೂಲಸ್ವರೂಪದಲ್ಲಿ ಸಕಲಜೀವಾತ್ಮರಿಗೆ ಲೇಸನ್ನೇ ಬಯಸುವಂಥವುಗಳಾಗಿವೆ. ವಿವಿಧ ಧರ್ಮಗಳ ಬಾಹ್ಯಾಚರಣೆ ಬೇರೆ ಬೇರೆ ಇದ್ದರೂ ಅವು ಮೂಲಸ್ವರೂಪದಲ್ಲಿ ಸಕಲಜೀವಾತ್ಮರಿಗೆ ಲೇಸನ್ನೇ ಬಯಸವಂಥವುಗಳಾಗಿವೆ. ಜೀವಕಾರುಣ್ಯವೇ ಎಲ್ಲ ಧರ್ಮಗಳ ತಾಯಿ ಬೇರಾಗಿದೆ. ದಯವೇ ಧರ್ಮದ ಮೂಲವೆಂದು ಅರಿತವರು ಸತ್ಯವಂತರಾಗಿರುತ್ತಾರೆ. ಸದ್ಭಾವನೆಗಳನ್ನು ಹೊಂದಿರುತ್ತಾರೆ. ಅಲ್ಲದೆ ಸದ್ವರ್ತನೆಯೊಂದಿಗೆ ದೈನಂದಿನ ಬದುಕನ್ನು ಸಾಗಿಸುತ್ತಿರುತ್ತಾರೆ.

ಶರಣರು ಬದುಕಿ ತೋರಿಸಿದ ನೈತಿಕಪ್ರಜ್ಞೆ, ಶೀಲ ಮತ್ತು ಕರುಣೆಯನ್ನು ಮೈಗೂಡಿಸಿಕೊಂಡೇ ಲೋಕಕ್ಕೆ ಒಳ್ಳೆಯದಾಗುವುದನ್ನು ಸಾಧಿಸಬೇಕಾಗುತ್ತದೆ. ಒಳ್ಳೆಯವರು ಯಾವುದೇ ಧರ್ಮಕ್ಕೆ ಸೇರಿದವರಾಗಿದ್ದರೂ ಪ್ರಜ್ಞೆಯ ಮೂಲಕ ಭೌತಿಕ ಪ್ರಪಂಚದಲ್ಲಿ ವ್ಯವಹರಿಸುತ್ತಾರೆ. ಶೀಲದ ಮೂಲಕ ಅನುಭಾವದ ಪ್ರಪಂಚವನ್ನು ಅರಿತುಕೊಳ್ಳುತ್ತಾರೆ. ಕರುಣೆಯ ಮೂಲಕ ಭಾವನಾ ಪ್ರಪಂಚವನ್ನು ಹೊಂದುತ್ತಾರೆ. ಬಸವಣ್ಣನವರು ಈ ಮೂರೂ ಪ್ರಪಂಚಗಳನ್ನು ಇಷ್ಟಲಿಂಗದಲ್ಲಿ ಹಿಡಿದಿಟ್ಟಿದ್ದಾರೆ. ಈ ಇಷ್ಟಲಿಂಗದ ವಿರಾಟ್ ಸ್ವರೂಪವೇ ಜಂಗಮಲಿಂಗವಾಗಿದೆ. ಹೀಗೆ ಅರಿತುಕೊಂಡು ಸತ್ಯ, ಸಹಜ, ಸದ್ಭಾವ ಮತ್ತು ಸದ್ವರ್ತನೆಯನ್ನು ಹೊಂದದಿದ್ದಾರೆ ನಾವು ಮಳೆಯಂತಾಗುವೆವು. ನಮ್ಮ ಕೊರಳಲ್ಲಿನ ಇಷ್ಟಲಿಂಗ ಮಳೆಯಲ್ಲಿ ಸಿಕ್ಕ ಕಲ್ಲಿನಂತಾಗುವುದು. ಬಸವಣ್ಣನವರ ದೇವರ ಆರಾಧಕರು ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವರಾಗಿರುತ್ತಾರೆ. ಚರಾಚರಕ್ಕೆಲ್ಲ ಒಳ್ಳೆಯದನ್ನು ಬಯಸುವರು ಎಲ್ಲಿದ್ದರೂ ಶರಣರಾಗೇ ಇರುತ್ತಾರೆ. ಕುಲಜರಾಗೇ ಇರುತ್ತಾರೆ. ವಿಶ್ವಾತ್ಮರು ಕುಲಜರು ಎಂದು ಬಸವಣ್ಣನವರು ಹೇಳಿದ್ದಾರೆ.

ಕಾಯಕ ಪ್ರಧಾನವಾದ ಜೀವನ ವಿಧಾನವನ್ನು ಬಸವಣ್ಣನವರು ತೋರಿಸಿಕೊಟ್ಟರು. ಬಸವಣ್ಣನವರು 'ಶರಣ ಸತಿ ಲಿಂಗಪತಿ' ಎಂದು ಹೇಳುತ್ತಾರೆ.

ಶರಣನಾದವನು ದೇವರ ಸತಿಯಾಗುವುದೆಂದರೆ ವಿಶ್ವದ ಮಾತೆ ಆಗುವುದು. ಅಂದರೆ ತಾಯ್ತನವನ್ನು ಸಾಧಿಸುವುದು, ಕರುಣೆಯಿಂದ ಮಾತ್ರ ತಾಯ್ತನವನ್ನು ಪಡೆದುಕೊಳ್ಳಲು ಸಾಧ್ಯ. ಇವರು ಕಟ್ಟಕಡೆಯ ಮನುಷ್ಯರನ್ನು ಪ್ರೀತಿಸಿದಂತೆ ತಾಯಿಯಾದವಳು ದುರ್ಬಲ ಮಗುವನ್ನೇ ಹೆಚ್ಚು ಪ್ರೀತಿಸುತ್ತಾಳೆ. ಹೆಚ್ಚಿನ ಕಾಳಜಿವಹಿಸುತ್ತಾಳೆ. ಹೀಗೆ ಮಾನವನ ನೈತಿಕಪ್ರಜ್ಞೆ ಹುಟ್ಟಿಕೊಳ್ಳುತ್ತದೆ. ಸಾಮಾಜಿಕ ನ್ಯಾಯದ ಸೃಷ್ಟಿಯಾಗುತ್ತದೆ. ಇಂಥ ಒಂದು ಉನ್ನತ ಸ್ಥಾನವನ್ನು ಮಾನವರು ತಲುಪಬೇಕಾದರೆ ಏಳು ಕೃತ್ಯಗಳಿಂದ ದೂರವಿರಬೇಕು. ಆಧ್ಯಾತ್ಮಿಕವಾದ ಒಳಜಗತ್ತು (ಅನುಭವಲೋಕ) ಮತ್ತು ಭೌತಿಕವಾದ ಹೊರಜಗತ್ತು (ಅನುಭವಲೋಕ)ಗಳ ಮಧ್ಯೆ ಅದ್ವೈತ ಸಾಧಿಸುವುದು ಬಸವಣ್ಣನವರ ಆಶಯವಾಗಿತ್ತು. ಲಿಂಗಾಂಗ ಸಾಮರಸ್ಯವೆಂದರೆ ಅನುಭಾವ ಮತ್ತು ಅನುಭವಗಳ ಸಾಮರಸ್ಯ. ಚೈತನ್ಯ ಮತ್ತು ವಸ್ತುವಿನ ಸಾಮರಸ್ಯ. ಈ ಚೈತನ್ಯಾತ್ಮಕ ಭೌತಿಕ ವಾದವನ್ನು ಇವರ ವಚನಗಳಲ್ಲಿ ನೈತಿಕತೆಯ ಪ್ರಜ್ಞೆ, ಸಾಮಾಜಿಕಪ್ರಜ್ಞೆ, ಸಂಕೀರ್ಣವಾದ ಮನಸ್ಸು ಮತ್ತು ಜಗತ್ತನ್ನು ಅರಿಯುವ ಮಾರ್ಗ ಕಠಿಣವೆನಿಸಿದಾಗ ಸಾಧಕರು ಹಿಂದೆ ಸರಿಯುವ ಸಾಧ್ಯತೆಗಳುಂಟು. ಆದರೆ ಬಸವಣ್ಣನವರ ಅಭಯವಚನ ಮತ್ತೆ ಹೊಸ ಚೈತನ್ಯ ತುಂಬುತ್ತದೆ.

ಸಾಮಾಜಿಕ ಮತ್ತು ಪರಿಸರದ ಬಿಕ್ಕಟ್ಟು ಮಿತಿಮೀರಿದೆ. ಇರುವಂಥದ್ದೆಲ್ಲ ಬದುಕಿನ ಕಾಣಿಕೆಯಾಗಿದೆ. ಮಾನವರಿಂದ ಬದುಕು ಸೃಷ್ಟಿಯಾಗಿಲ್ಲ, ಬದುಕೊಂದು ರಹಸ್ಯ, ಜೀವಂತವಿರುವಂಥದ್ದನ್ನೆಲ್ಲ ಚೈತನ್ಯಮಯಮಾಡುತ್ತದೆ. ಅಲ್ಲದೆ ನಿಸರ್ಗದಲ್ಲಿ ಮತ್ತು ಮಾನವಕುಲದಲ್ಲಿ ನಿರಂತರವಾಗಿ ಪುನರ್ ಸೃಷ್ಟಿಯಾಗುವಂತೆ ನೋಡಿಕೊಳ್ಳುತ್ತದೆ. ಮಾನವ ಮತ್ತು ನಿಸರ್ಗದ ಮಧ್ಯೆ ಸಂಬಂಧ ಸೃಷ್ಟಿಸುತ್ತಲೇ ಇರುತ್ತದೆ. ವೈವಿಧ್ಯಗಳಿದ್ದರೂ ಬದುಕಿನ ಹಕ್ಕನ್ನು ರಕ್ಷಿಸುವುದು ಮಾನವಕುಲದ ಸಾಮೂಹಿಕ ಜವಾಬ್ದಾರಿಯಾಗಿದೆ. ಈ ನೈತಿಕ ಪ್ರಜ್ಞೆಯ ಆಧಾರವಾದ ಮೇಲೆ ರಚಿತವಾದ 'ಘೋಷಣೆ' ನಿಜವಾದ ಅರ್ಥದಲ್ಲಿ ಜಾಗತಿಕವಾಗಿದೆ.

ಈ ಕಾರಣದಿಂದ "ಮಾನವ ಜವಾಬ್ದಾರಿಗಳ ಘೋಷಣೆ" ಎಂಬುದು ಭೂಮಿಯ ಮೇಲೆ ಇರುವ ಎಲ್ಲವನ್ನು ಅಂದರೆ ಕಾಣುವಂಥದ್ದು ಮತ್ತು ಕಾಣಲಾರದಂಥದ್ದನ್ನೂ ತಟ್ಟುವಂಥದ್ದು. ಮಾನವನ ಅರಿವಿಗೆ ಬಾರದ ಮತ್ತು ಮಾನವನ ಹಿಡಿತದಲ್ಲಿರುವ ಎಲ್ಲವನ್ನೂ ಅದು ತನ್ನದಾಗಿಸಿಕೊಳ್ಳುವುದು. ಈ ಎಲ್ಲವುಗಳ ರಕ್ಷಣೆಯ ಜವಾಬ್ದಾರಿ ಇಡೀ ಮಾನವಕುಲದ ಮೇಲಿದೆ ಎಂಬುದನ್ನು ತಿಳಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ವಿವಿಧ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನ ವಿಧಾನಗಳ ಮೇಲೆ ಇಷ್ಟೊಂದು ದೂರಗಾಮಿಯಾದ ಪರಿಣಾಮಗಳನ್ನು ಜಗತ್ತು ಈ ಹಿಂದೆ ಕಂಡಿರಲಿಲ್ಲ. ಸದಾ ಹೆಚ್ಚುತ್ತಿರುವ ಅಂತರ್ ಸಂಬಂಧಗಳಿಂದ ಅನೇಕ ಸಾಧ್ಯತೆಗಳು ತೆರೆದುಕೊಂಡಿದ್ದರೂ ಮಾನವ ಜನಾಂಗ ಅನೇಕ ಶಕ್ತಿಗಳನ್ನು ಹೊಂದಿದ್ದರೂ ವಿವಿಧ ಕ್ಷೇತ್ರಗಳಲ್ಲಿ ಹಿಂದೆಂದೂ ಸಂಭವಿಸದಂಥ ಬಿಕ್ಕಟ್ಟು ಉದ್ಭವಿಸುತ್ತಿವೆ. ಆದ್ದರಿಂದಲೇ ಬಸವಣ್ಣನವರ ವಚನಗಳು ನೈತಿಕಪ್ರಜ್ಞೆ ೨೧ನೇ ಶತಮಾನಕ್ಕೂ ಅವಶ್ಯಕತೆ ಎನಿಸಿವೆ.

ಲೌಕಿಕ ಅಧಿಕಾರ ಮತ್ತು ಅಧ್ಯಾತ್ಮಿಕ ಸಾಧನೆಗಳೆರಡನ್ನು ಸಾಮಾಜಿಕ, ನೈತಿಕತೆಯ ವಿಷಮತೆಯ ನಿರ್ಮೂಲನಕ್ಕಾಗಿ ವಿನಿಯೋಗಿಸಲು ಬಸವಣ್ಣನವರು ಸಂಕಲ್ಪಿಸಿದರು. ಧರ್ಮದ ನಿಜ ಸ್ವರೂಪವನ್ನರಿಯಲು ಅವಕಾಶವಿಲ್ಲದೆ ಬಾಯಾರಿ ಬಳಲುತ್ತಿರುವ ದೀನ ದುಃಖಿಗಳಿಗಾಗಿ ಅವರ ಹೃದಯವು ಮಿಡಿಯಿತು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಹಿಂಸೆ ಮತ್ತು ಅನ್ಯಾಯಗಳನ್ನು ಕಂಡು ಅವರ ಮನಸ್ಸು ಕುದಿಯಿತು. ತಾವು ಉತ್ತಮ ವರ್ಣದವರಾಗಿದ್ದರೂ ಅದನ್ನು ತ್ಯಜಿಸಿ ಎಲ್ಲರನ್ನೂ ಸಮಾನವೆಂದು ಸಾರುವ ಮಾನವ ಧರ್ಮವನ್ನು ಜೀವಂತಗೊಳಿಸಿ ಮಾನವತೆಯನ್ನು ಉದ್ಧರಿಸಲು ಹೆಣಗುತ್ತಿದ್ದರು. ಅವರ ಕಾರ್ಯಕ್ಷೇತ್ರ ದಿನ ದಿನಕ್ಕೆ ವ್ಯಾಪಕವಾಗಿ ಬೆಳೆದು ದೇಶದ ನಾನಾ ಭಾಗಗಳಿಂದ ಅನೇಕ ಸಾಧಕರನ್ನು ಅದು ಆಕರ್ಷಿಸಿತು. ಅವರ ಕಾರ್ಯಕ್ಷೇತ್ರ ವಿಸ್ತಾರವಾದಂತೆಲ್ಲಾ ಸಮಸ್ಯೆಗಳೂ ಹೆಚ್ಚಿದವು. ಆ ವೇಳೆಗೆ ಅಲ್ಲಮ ಪ್ರಭುವಿನಂತಹ ಜ್ಞಾನವೈರಾಗ್ಯಗಳ ತೇಜೋಮೂರ್ತಿ ಯೊಂದರ ಅವಶ್ಯಕತೆಯಿತ್ತು. ಬಸವಣ್ಣನವರ ಹೃದಯ ಅಂತಹ ಮಹಾಶಕ್ತಿಗಾಗಿ ಹಾರೈಸುತ್ತಿತ್ತು. ಆ ಕರೆಯನ್ನು ಕೇಳಿಯೇ ಎಂಬಂತೆ ಅಲ್ಲಮಪ್ರಭುವು ಸಿದ್ಧರಾಮ ಮಹಾಯೋಗಿಯನ್ನು ಕರೆದುಕೊಂಡು ಕಲ್ಯಾಣಕ್ಕೆ ಬರುತ್ತಾನೆ. ಬಸವಣ್ಣನವರ ವ್ಯಕ್ತಿತ್ವವನ್ನು ಕಂಡು ಅವನ ಮನಸ್ಸು ಮಾರುಹೋಗುತ್ತದೆ. ಎಲ್ಲಿಯೂ ನೆಲೆಯಾಗಿ ನಿಲ್ಲದೆ ಜಗದ್ಧಾರಿತ ಜಂಗಮನಾಗಿ ಸಂಚಾರವನ್ನು ಕೈಗೊಂಡಿದ್ದು ಅಲ್ಲಮನು ಕಲ್ಯಾಣದಲ್ಲಿ ಕೆಲವು ಕಾಲ ನೆಲೆಸಿದುದು ಒಂದು ಅಪೂರ್ವ ಘಟನೆಯೇ ಸರಿ.

ಈ ಹಿನ್ನೆಲೆ ಪ್ರಸ್ತುತ ನಿಬಂಧವು ಒಟ್ಟು ೬ ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲ ಅಧ್ಯಾಯದಲ್ಲಿ ಅಧ್ಯಯನದ ಸ್ವರೂಪ ಮತ್ತು ಉದ್ದೇಶ ತಿಳಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಹನ್ನೆರಡನೇ ಶತಮಾನದ ಸಾಮಾಜಿಕ ಮತ್ತು ರಾಜಕೀಯ ಸನ್ನಿವೇಶ ತಿಳಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ಹನ್ನೆರಡನೇ ಶತಮಾನದಲ್ಲಿ

ಸೃಷ್ಟಿಯಾದ ವಚನ ಸಾಹಿತ್ಯದ ಉಗಮ ಮತ್ತು ಉದ್ದೇಶ, ನಾಲ್ಕನೇ ಅಧ್ಯಾಯದಲ್ಲಿ ಬಸವಣ್ಣನ ವ್ಯಕ್ತಿತ್ವ ಮತ್ತು ಸಾಹಿತ್ಯಕ ಸಾಧನೆಯನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ. ಐದನೇ ಅಧ್ಯಾಯದಲ್ಲಿ ಬಸವಣ್ಣನವರ ವಚನಗಳಲ್ಲಿ ನೈತಿಕ ಪ್ರಜ್ಞೆಯನ್ನು ತಿಳಿಸುತ್ತದೆ. ಆರನೇ ಅಧ್ಯಾಯವು ಬಸವಣ್ಣನ ವಚನಗಳಲ್ಲಿ (ನೈತಿಕ ಪ್ರಜ್ಞೆಯು) ವ್ಯಕ್ತವಾಗಿರುವ ನೈತಿಕ ಮೌಲ್ಯದ ವಿವೇಚನೆಯನ್ನು ಉಂಟು ಮಾಡಿ ಉಪಸಂಹಾರವನ್ನು ಒಳಗೊಂಡಿದೆ.

## ಅಧ್ಯಾಯ – ೨

# ಹನ್ನೆರಡನೇ ಶತಮಾನದ ಸಾಮಾಜಿಕ ಮತ್ತು ರಾಜಕೀಯ ಸನ್ನಿವೇಶ

ವಚನ ಸಾಹಿತ್ಯದ ಆರಂಭ ಯುಗವಾಗಲಿ ಅದರ ಅತ್ಯುನ್ನತ ಕಾಲವಾಗಲಿ ಕಲ್ಯಾಣ ಚಾಲುಕ್ಯರ ಮತ್ತು ಅವರ ಸಾಮಂತರಾಗಿದ್ದು ಮುಂದೆ ಕೆಲವು ಕಾಲ ತಾವೇ ಚಕ್ರವರ್ತಿಗಳಾಗಿ ಆಳಿದ ಕಲಚೂರಿಗಳ ಆಡಳಿತದ ಅವಧಿಯಲ್ಲಿ ಬರುತ್ತದೆ. ಒಂದು ಸಂಘಟಿತ ಹೋರಾಟವಾಗಿ ರೂಪುಗೊಳ್ಳಲು ಸಮರ್ಥವಾದ ಯಾವುದೇ ಚಳುವಳಿಗಳು ಚರಿತ್ರೆಯಲ್ಲಿ ಕೇವಲ ಧಾಮಿಕ ಚೌಕಟ್ಟಿನಲ್ಲಿ ಮಾತ್ರ ಹುಟ್ಟಿದಂಥವುಗಳಾಗಿರುವುದಿಲ್ಲ. ಆಯಾ ಕಾಲದ ಅನಿವಾರ್ಯತೆಯಿಂದಾಗಿ ಅವು ಧಾರ್ಮಿಕ ತೆರೆಯ ಹಿಂದೆ ಕೆಲಸ ಮಾಡಿದರೂ ಅವುಗಳ ಮೂಲ ನೆಲೆ ಬದುಕಿನ ಮೂಲಸೂತ್ರವಾದಂತಹ ಆರ್ಥಿಕ ಜೀವನ ಸ್ವರೂಪವನ್ನು ಅವಲಂಬಿಸಿಕೊಂಡೇ ನಡೆದಿರುತ್ತದೆ. ಈ ದೃಷ್ಟಿಯಿಂದ ವಚನಕಾರರ ಚಳುವಳಿ ಎನ್ನುವುದು ಮೇಲುನೋಟಕ್ಕೆ ಕೇವಲ ಧಾರ್ಮಿಕ ಚಟುವಟಿಕೆಯಾಗಿ ಕಂಡರೂ ಅದರ ಆಳದಲ್ಲಿ ಈ ಚಳುವಳಿ ಹುಟ್ಟುವುದಕ್ಕೆ ಕಾರಣವಾದ ಅಂಶಗಳು ಧಾರ್ಮಿಕ ಆಚರಣೆಗಳಿಗಿಂತ ಬೇರೆಯಾದವುಗಳೇ ಆಗಿವೆ.

ಆ ಕಾಲದ ಸಾಮಾಜಿಕ, ರಾಜಕೀಯ ವಚನ ಸಾಹಿತ್ಯದ ಸ್ವರೂಪ ವೈಶಿಷ್ಟ್ಯಗಳನ್ನು ಸನ್ನಿವೇಶಗಳೂ ಕೂಡ ನಿರ್ಧರಿಸುತ್ತದೆ. ಕರ್ನಾಟಕ ಇತಿಹಾಸದಲ್ಲಿ ಕಲ್ಯಾಣ ಚಾಳುಕ್ಯರದು ಒಂದು ಉಜ್ವಲಯುಗ. ಅವರಲ್ಲಿ ಅತ್ಯಂತ ಪ್ರಸಿದ್ಧನಾದವನು ಚಾಲುಕ್ಯ ವಿಕ್ರಮಶಕೆಯನ್ನು ಆರಂಭಿಸುವ ಆರನೇ ವಿಕ್ರಮಾದಿತ್ಯ. ಉತ್ತರ ಭಾರತದಲ್ಲಿ ಅನೇಕ ರಾಜ್ಯಗಳನ್ನು ಗೆದ್ದು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ದಕ್ಷಿಣದಲ್ಲಿ ಸ್ವಾತಂತ್ರರಾಗಲು ಹವಣಿಸಿದ ಹೊಯ್ಸಳರನ್ನು ಸೋಲಿಸಿ ತನ್ನ ಅಧಿಕಾರದ ವ್ಯಾಪ್ತಿಯನ್ನು ದಕ್ಷಿಣ ಕರ್ನಾಟಕದಲ್ಲಿ ದೃಢಪಡಿಸಿದನು. ವಿಜ್ಞಾನೇಶ್ವರನೆಂಬ ವಿದ್ವಾಂಸ, ವಿಕ್ರಮಾದಿತ್ಯ ನಂತರದ ದೊರೆ, ಅವರನ ರಾಜಧಾನಿ ಕಲ್ಯಾಣದಂತಹ ಪಟ್ಟಣವು ಹಿಂದೆಯೂ ಇರಲಿಲ್ಲ ಮುಂದೆಯೂ ಇರುವುದಿಲ್ಲ ಎಂದಿದ್ದಾನೆ. ಬಿಲ್ಹಣನ ಪ್ರಕಾರ ಇವನದು 'ರಾಮರಾಜ್ಯ'ವಂತೆ. ರಾಷ್ಟ್ರಕೂಟರನ್ನು ಸೋಲಿಸಿ ಕಲ್ಯಾಣ ಚಾಲುಕ್ಯ ವಂಶವನ್ನು ಪುನರುತ್ಥಾನ ಮಾಡಿದ. ತೈಲಪನಿಂದ ವಿಕ್ರಮಾದಿತ್ಯನವರೆಗೆ ಒಂದೇ ಸಮನಾಗಿ ಮೇಲೇರಿದ ಈ ವಂಶದ ಅದೃಷ್ಟರೇಖೆ ವಿಕ್ರಮಾದಿತ್ಯದ ಸಾವಿನ ಅನಂತರ ಕೆಳಗಿಳಿಯಲು ಆರಂಭವಾಗುತ್ತದೆ. ಈ ವಿಕ್ರಮಾದಿತ್ಯನ ಕಾಲದಲ್ಲಿದ್ದ ಕೊಂಡಗುಳಿ ಕೇಶಿರಾಜ ಕರ್ನಾಟಕದ ಮೊದಲ ವೀರಶೈವ ಕವಿ ಎನಿಸಿಕೊಂಡಿದ್ದಾನೆ. ವಿಕ್ರಮಾದಿತ್ಯನ

ಹನ್ನೆರಡು ರಾಣಿಯರಲ್ಲಿ ಒಬ್ಬಳಾದ ಚಾದಲದೇವಿಯು ನೃತ್ಯವಿದ್ಯಾಧರಿಯೆಂದು ಅಭಿನವ ಸರಸ್ವತಿಯೆಂದು, ಅಭಿನವ ಶಾರದೆಯೆಂದು ಪ್ರಖ್ಯಾತಳಾದ ಕಲಾವಿದೆಯಾಗಿದ್ದಳು. ಇವಳ ಮಗ ಮೂರನೇ ಸೋಮೇಶ್ವರ ವಿದ್ವಾಂಸನಾದನೆ ಹೊರತು ದಕ್ಷ ಆಡಳಿತಗಾರನಾಗಿರಲಿಲ್ಲ. ಇವನು ಚಾಲುಕ್ಯ ಸಿಂಹಾಸನವನ್ನೇರಿದೂ ರಾಜಕೀಯವಾಗಿ ತಂದೆಯ ಮಟ್ಟಕ್ಕೆ ಬರಲಾಗಲಿಲ್ಲ. ವೆಂಗಿಮಂಡಳದ ಚೋಳರು ತಮ್ಮಿಂದ ಕಿತ್ತುಕೊಂಡಿದ್ದ ಭಾಗಗಳನ್ನು ಚಾಲುಕ್ಯರಿಂದ ವಶಪಡಿಸಿಕೊಂಡರು.

ಆರನೇ ವಿಕ್ರಮಾದಿತ್ಯನ ಜೊತೆ ಸೆಣಸಾಡಿ ವಿಫಲನಾಗಿದ್ದ ಹೊಯ್ಸಳ ವಿಷ್ಣುವರ್ಧನನು ಸೋಮೇಶ್ವರನ ಚಕ್ರವರ್ತಿತ್ವವನ್ನು ಬಲವಂತದಿಂದ ಒಪ್ಪಿಕೊಳ್ಳ-ಬೇಕಾಗಿದ್ದರೂ ಸ್ವತಂತ್ರನಾಗಲೂ ಮಿಸುಕಾಡಿ ಅದರಲ್ಲಿ ಸ್ವಲ್ಪ ವಿಜಯವನ್ನು ಸಾಧಿಸಿದ್ದನು. ಈ ಸೋಮೇಶ್ವರ ಚಕ್ರವರ್ತಿ ಬಹುತೇಕ ಕಲ್ಯಾಣದಲ್ಲೇ ಇರುತ್ತ ತಂದೆಯಿಂದ ಬಂದ ರಾಜ್ಯವನ್ನು ಅನುಭವಿಸುತ್ತ ತನಗೆ ದೊರೆತ ಶಾಂತಿಯ ವೇಳೆಯನ್ನು ವಿದ್ಯುತ್ ಕಾರ್ಯಗಳಿಗಾಗಿ ಬಳಸಿದ. 'ಸರ್ವಜ್ಞ ಚಕ್ರವರ್ತಿ'[೧] ಎಂದು ಪ್ರಸಿದ್ಧನಾದ

ಇವನ ಮಗನಾದ ಇಮ್ಮಡಿ ಜಗದೇಕಮಲ್ಲನ ಕಾಲದಲ್ಲಿ ಸುಮಾರು ೧೧೩೯-೪೯ರಲ್ಲಿ ಬಹುಶಃ ಜೇಡರದಾಸಿಮಯ್ಯನು ಇದ್ದದ್ದು ಇವನ ಕಾಲಕ್ಕೆ ಸಾಮಂತರಾಗಿದ್ದು ಹೊಯ್ಸಳರು ಇನ್ನು ಪ್ರಬಲರಾದರು. ಆದರೆ ಅದಕ್ಕಿಂತ ಮುಖ್ಯ ಸಂಗತಿ ಸಾಮಂತಿಕೆಯನ್ನು ಒಪ್ಪಿಕೊಂಡು ಈಗಿನ ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ಮಂಗಳಿವೇಡೆ ಪ್ರಾಂತ್ಯದಲ್ಲಿ ಆಳುತ್ತಿದ್ದ ಕಲಚೂರಿಗಳು ಪ್ರಬಲರಾಗುತ್ತ ಬಂದದ್ದು ಇವನ ಅನಂತರ ಬಂದ ಮೂರನೇ ತೈಲಪ ಅತ್ಯಂತ ದುರ್ಬಲನಾಗಿದ್ದು ಇವನ ಕಾಲದಲ್ಲೇ ಬಿಜ್ಜಳ ಕ್ರಮೇಣ ಪ್ರಬಲನಾಗುತ್ತಾ ಬಂದು ಕೊನೆಗೆ ಚಕ್ರವರ್ತಿಯನ್ನೇ ಕೊಂದು ತಾನೇ ಚಕ್ರವರ್ತಿಯೆಂದು ಘೋಷಿಸಿಕೊಂಡನು. ಬಿಜ್ಜಳ ಕಲಚೂರಿ ವಂಶದವನು ಮತ್ತು ಚಾಲುಕ್ಯರ ಸಾಮಂತನಾಗಿದ್ದನು. ಇವನ ಅಜ್ಜನ ಕಾಲದಲ್ಲಿ ಕಲ್ಯಾಣ ಚಾಲುಕ್ಯರೊಂದಿಗೆ ರಕ್ತ ಸಂಬಂಧವು ಏರ್ಪಟ್ಟಿತ್ತು. ದುರ್ಬಲ ರಾಜಕೀಯ ಸನ್ನಿವೇಶವನ್ನು ಉಪಯೋಗಿಸಿಕೊಂಡು ಬಿಜ್ಜಳ ಮೂರನೇ ತೈಲಪನನ್ನು ಕೊಂದು ತಾನೇ ಚಕ್ರವರ್ತಿಯೆಂದು ಘೋಷಿಸಿಕೊಂಡು ಕ್ರಿ.ಶ. ೧೧೬೨ರಲ್ಲಿ ಸಿಂಹಾಸನವನ್ನೇರಿ ತಾನೇ ಚಕ್ರವರ್ತಿಯಾದನು. ಸಾಮಂತನಾಗಿದ್ದ ಬಿಜ್ಜಳ ಆಳುತ್ತಿದ್ದುದು ಮಂಗಳಿವೇಡೆಯಲ್ಲಿ

---

೧. ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ, ಸಂಪುಟ ೫, ವಚನಸಾಹಿತ್ಯ, ಪು. ೧೭.

ಬಸವಣ್ಣ ಮೊದಲು ಹೋಗಿ ಭಂಡಾರಿಯಾಗಿ ಮಂಗಳಿವೇಡೆಯಲ್ಲಿ ಬಿಜ್ಜಳನ ಹತ್ತಿರ ಕೆಲಸಕ್ಕೆ ಸೇರಿದಾಗ ತಾನು ಚಕ್ರವರ್ತಿಯಾಗುವ ಕನಸನ್ನು ಕಾಣುತ್ತಿದ್ದ ಬಲಿಷ್ಠ ಸಾಮಂತನಾಗಿದ್ದ.

ಬಿಜ್ಜಳ ತೈಲಪನನ್ನು ಕೊಂದು ಪಟ್ಟಕ್ಕೆ ಬಂದ ಮೇಲೆ ಆಡಳಿತದ ಬಿಗಿ ಕಡಿಮೆಯಾಯಿತು. ಚಾಲುಕ್ಯ ಹಿತೈಷಿಗಳು ಬೇರೆ ಬೇರೆ ಕಡೆ ಹೋಗಿ ಅಲ್ಲೆಲ್ಲಾ ಬಿಜ್ಜಳನ ಬಗೆಗೆ ಅತೃಪ್ತಿಯನ್ನು ಬಿತ್ತಿದ್ದರು. ಇದಕ್ಕೆ ಸಾಕ್ಷಿಯಾಗಿ ೧೧೬೨ ಬನವಾಸಿ ಶಾಸನ ಬಿಜ್ಜಳನ ಸೇನೆ ತಗರಟೆಯ ಮೇಲೆ ನಡೆಸಿದ ದಾಳಿಯನ್ನು ಹೇಳುತ್ತದೆ. ಇದಲ್ಲದೆ ಪ್ರಾಂತ್ಯಾಧಿಕಾರಿಗಳ ಮೇಲೆ ಐದು ಅಥವಾ ನಾಲ್ಕು ಜನ ಕರಣಿಕರನ್ನಿಟ್ಟು ಅವರು ತನ್ನ ಹಿತ ನೋಡಿಕೊಂಡು ಗೂಢಚಾರರಾಗಿರುವಂತೆ ಮಾಡಿದ್ದನು. ರಾಜ್ಯವನ್ನು ತನ್ನ ಎರಡನೇ ಮಗ ಸೋಮೇಶ್ವರನಿಗೆ ವರ್ಗಾಹಿಸಿ ಅದನ್ನು ಭದ್ರ ಮಾಡಲು ಯೋಚಿಸಿದ. ಅವನ ಆರು ಜನ ಗಂಡಮಕ್ಕಳಲ್ಲಿ ಹಿರಿಯವನಾದ ವಜ್ರದೇವ, ಮಗ ಕರ್ಣನನ್ನು ಬಿಟ್ಟು ಸತ್ತಿದ್ದ. ಉಳಿದ ಮಕ್ಕಳಾದ ಸೋಮದೇವ, ಮಲ್ಲಿಕಾರ್ಜುನ, ಸಂಕಮ, ಅಹವಮಲ್ಲ, ಸಿಂಘಣ ಇವರಲ್ಲಿ ರಾಜ್ಯಕ್ಕಾಗಿ ಕಚ್ಚಾಟವಿದ್ದುದಲ್ಲದೆ ಬಿಜ್ಜಳನ ತಮ್ಮ ಮೈಳಿಗಿಯೂ ತಿರುಗಿಬಿದ್ದಿದ್ದ ಸೋಮದೇವನನ್ನು ಗದ್ದುಗೆಗೆ ತರುವುದರ ಪೂರ್ವಯೋಜನೆಯೇ ಎಂಬಂತೆ ಅವನಿಗೆ ಹಿಂದೆ ತಾನು ಆಳುತ್ತಿದ್ದ ತರ್ದೆವಾಡಿಯನ್ನು ಆಳಲು ಕೊಟ್ಟಿದ್ದ.

ಮೊದಲ ಮಗ ಪಟ್ಟಕ್ಕೆ ಬರಬೇಕು. ಅವನಿಲ್ಲವಾದರೆ ಅವನ ಮಗನಿಗೆ ಪಟ್ಟವನ್ನು ಕಟ್ಟಬೇಕು ಎಂಬ ಕಾರಣದಿಂದಲೋ ಅಥವಾ ಕರ್ಣನ ಹೆಸರಿನಲ್ಲಿ ತಾನೇ ಅಧಿಕಾರ ಗಳಿಸಬೇಕೆಂದೇ ಬಿಜ್ಜಳನನ್ನು ಅಧಿಕಾರಕ್ಕೆ ತಂದ ಕಸವಯ್ಯ ಕರ್ಣನ ಪರವಹಿಸುತ್ತಾನೆ. ಅದಕ್ಕೆ ಎದುರಾಗಿ ಬಸವನನ್ನು ಅಧಿಕಾರದಿಂದ ಹೊರಕ್ಕೆ ಕಳುಹಿಸಿದ ಶಕ್ತಿಗಳ ಪ್ರತಿನಿಧಿಯಾಗಿ ಬ್ರಾಹ್ಮಣನಾದ ಮಾಧವ ಈಗ ಸೋಮೇಶ್ವರ. ಆಗ ಇನ್ನು ಅಧಿಕಾರದಲ್ಲಿದ್ದ ಬಿಜ್ಜಳಿನಿಗೆ ಮಂತ್ರಿ ಆಪ್ತನೂ ಆಗಿದ್ದಾನೆ. ಸೋಮದೇವ ಪಟ್ಟಕ್ಕೆ ಬಂದರೂ ರಾಜ್ಯಾಡಳಿತ ಪ್ರಮುಖ ಸೂತ್ರಗಳು ಇನ್ನೂ ಬಿಜ್ಜಳನ ಕೈಯಲ್ಲೇ ಉಳಿದಿತ್ತು ಎಂಬುದನ್ನು ೧೧೬೮ರ ಬಳ್ಳಿಗಾವೆ ಶಾಸನ ಬಿಜ್ಜಳನನ್ನೇ ಚಕ್ರವರ್ತಿ ಬಿರುದುಗಳ ಸಹಿತ ಹೊಗಳಿ ಅವನು ರಾಜ್ಯಾಧಿಕಾರವನ್ನು ತನ್ನ ಮಗನಿಗೆ ವಹಿಸಿದನೆಂದು ಹೇಳಿ ಸೋಮದೇವನ ಪರಾಕ್ರಮವನ್ನು ಕೊಂಡಾಡುತ್ತದೆ. ರಾಜ್ಯಾಧಿಕಾರದಲ್ಲಿ ಇಷ್ಟೆಲ್ಲಾ ವೈಪರೀತ್ಯಗಳಾಗುತ್ತಿದ್ದರೂ ವಚನಕಾರರಲ್ಲಿ ಅನೇಕರಿಗೆ ನೇರವಾಗಿ ರಾಜಕೀಯದಲ್ಲಿ ಪಾಲ್ಗೊಳ್ಳವುದು ಬೇಡವಾಗಿತ್ತು. ಆದರೆ ಅವರಲ್ಲಿಯೇ ಇದ್ದ ಅನೇಕರಿಗೆ ಬಸವನ

ಕೆಲಸ ಹೋದದ್ದು ಅರಸನ ಕೊಲೆ. ಇವುಗಳಿಂದ ಇವರು ಬಿಜ್ಜಳನ ವಿರೋಧವಾಗಿದ್ದರು ಎಂಬುದೂ ಇವರ ಬಿಜ್ಜಳ ಮತ್ತು ಸೋಮದೇವರ ವಿರೋಧಿ ಗುಂಪುಗಳ ಪರವಾಗಿದ್ದರು ಎಂಬುದಕ್ಕೆ ಸಿದ್ದರಾಮ ಚಾರಿತ್ರ್ಯದಲ್ಲಿ ರಾಘವಾಂಕ ಕರ್ಣ ಸಿದ್ದರಾಮನನ್ನು ಸಹಾಯ ಕೇಳಿದ್ದ ಎಂಬ ಅಂಶ ಸೂಚನೆಯಾಗಬಹುದೆನ್ನಿಸುತ್ತದೆ.[೧] ಬಸವಣ್ಣನ ಅಧಿಕಾರ ತ್ಯಾಗದ ಅನಂತರ ವಚನಕಾರರ ಚಳುವಳಿ ಕ್ರಿಯಾತ್ಮಕವಾಗಿ ತೀವ್ರ ಸ್ವರೂಪವನ್ನು ಪಡೆದಿದೆ. ಬ್ರಾಹ್ಮಣರು ಮಾಧವನ ಮೂಲಕ ಅಧಿಕಾರವನ್ನು ಪುನಃ ಸ್ಥಾಪಿಸಿಕೊಂಡಿದ್ದಲ್ಲದೆ ಸೋಮದೇವ ಶೈವನಾಗಿಯೇ ಇದ್ದ ಮಠಗಳಿಗೆ ದತ್ತಿ ಬಿಟ್ಟಿದ್ದಾನೆ. ತೀವ್ರಗತಿಯಲ್ಲಿ ಹಚ್ಚುತ್ತಿದ್ದ ಚಳುವಳಿಯನ್ನು ಹತ್ತಿಕ್ಕದೆ ಹೋದರೆ ಅದರ ಅಪಾಯವೇನೆಂಬುದನ್ನು ತಿಳಿದು ಒಬ್ಬನ ಸುತ್ತ ಅಸಂಖ್ಯಾತ ಜನ ಸುತ್ತುವರಿಯುವುದನ್ನು ನಿಯಂತ್ರಿಸಬೇಕೆಂದು ಬಿಜ್ಜಳ ಈಗ ನಿರ್ಧರಿಸಿದ. ಮಗನ ರಾಜ್ಯವನ್ನು ನಿರಾತಂಕ ಮಾಡುವ ಹೊಣೆ ಈಗ ಅವನ ಮೇಲಿತ್ತು. ಈ ಮಧ್ಯೆ ತಮಿಳುನಾಡಿನ ಶೈವರ ಕಥೆಗಳು ದಕ್ಷಿಣ ಕರ್ನಾಟಕದಲ್ಲಿ ರಾಮಾನುಜರ ಚಟುವಟಿಕೆಗಳೂ ಬಸನಾದಿಗಳಿಗೆ ಇನ್ನಷ್ಟು ಉತ್ತೇಜನವನ್ನು ಒದಿಗಸಿದೆ.

ಹನ್ನೊಂದನೆ ಶತಮಾನದ ಮಧ್ಯಭಾಗದಿಂದ ಕರ್ನಾಟಕದಲ್ಲಿ ಅದರಲ್ಲೂ ವಿಶೇಷವಾಗಿ ವಚನಕಾರರು ಹುಟ್ಟಿ ಬೆಳೆದ ಭಾಗದಲ್ಲಿ ಜನತೆಯ ಅದರಲ್ಲೂ ವೃತ್ತಿಗಳನ್ನು ಅವಲಂಭಿಸಿಕೊಂಡು ಬದುಕುತ್ತಿದ್ದವರ ಮೆಲೆ ಹಾಕಲಾಗಿದ್ದ ತೆರಿಗೆಗಳನ್ನು ಗಮನಿಸಿದರೆ ವಚನಕಾರರಾಗಿ ಬಂದವರು ಬಹಳಷ್ಟು ಜನಕಾಯಕ ಜೀವಿಗಳೇ ಆಗಿರುವುದೇಕೆಂಬುದು ನಮಗೆ ತಿಳಿಯುತ್ತದೆ. ಈ ಕಾಲಾವಧಿಯಲ್ಲಿ ಹಾಕಲಾದ ತೆರಿಗೆಗಳನ್ನು ಗಮನಿಸಿದರೆ ಎಲ್ಲದರ ಮೆಲೂ ತೆರಿಗೆಗಳನ್ನು ವಿಧಿಸುತ್ತಿದ್ದರು. ಜನ ಸಾಮಾನ್ಯರ ದೃಷ್ಟಿಯಿಂದ ಭೂಮಿ, ಅಂಗಡಿ, ಮನೆ, ಅಡಿಕೆ ಇವುಗಳು ಮೆಲೆ ವರ್ಷಕ್ಕೊಮ್ಮೆ ಹಾಕುತ್ತಿದ್ದ ಸಿದ್ದಾಯವೊಂದನ್ನು ಬಿಟ್ಟರೆ ಉಳಿದವುಗಳೆಲ್ಲ ನಿರಂತರವಾಗಿ ಕೊಡಬೇಕಾಗಿದ್ದ ತೆರಿಗೆಗಳು. ಅಕ್ಕಸಾಲೆ, ನಾಯಿಂದ, ಅಂಬಿಗ, ಅಗಸ, ಕಮ್ಮಾರ, ಕುಂಬಾರ ಮೊದಲಾದವರು ತೆರಿಗೆಗಳನ್ನು ಕೊಡಬೇಕಾಗಿತ್ತು. ಇವರಲ್ಲದೆ ಗಾಣದ ತೆರೆ, ನೂಲುತೆರೆ, ಮಗ್ಗದೆರೆ, ಕುಲಮೆದೆರೆ ಹೀಗೆ ಎಲ್ಲ ವೃತ್ತಿಯವರೂ ತೆರಿಗೆಯನ್ನು ಕೊಡಬೇಕಾಗುತ್ತಿತ್ತು. ಉಪ್ಪು ಮಾಡುವವರ ಮೆಲೆ ಸುಂಕವಿದ್ದಿತ್ತು. ೧೧೬೦ರ ಶಾಸನವೊಂದು ದೋಣಿ ತೆಪ್ಪಗಳಿಗೆ ಸುಂಕ ಹಾಕುತ್ತಿದ್ದನ್ನು ತಿಳಿಸುತ್ತದೆ. ತೆರಿಗೆಗಳಲ್ಲದೆ

---

೧. ವೀರಶೈವ ಧರ್ಮ ದರ್ಶನ, ಸಂಪುಟ-೧, ಪ್ರಧಾನ ಸಂಪಾದಕರು: ಯು.ಆರ್.ಅನಂತಮೂರ್ತಿ

ಮದುವೆ, ಚಪ್ಪರ, ಹಸೆ, ಬಾಸಿಂಗ ಇವುಗಳಿಂದ ಹಿಡಿದು ಹುಡುಗಿ ಮೈನೆರೆದರೆ, ಒಡಲಿಟ್ಟರೆ, ತೆರಿಗೆ ಕೊಡಬೇಕಾಗಿತ್ತು. ಇವುಗಳ ಸಾಲದೆಂಬಂತೆ ಅರಸರು ದರ್ಶನ ಕೊಟ್ಟರೆ ರಾಣಿ ಮೆರವಣಿಗೆ ಬಂದಾಗ, ದರ್ಶನ ತೆರೆ ಮತ್ತು ದೇವಿದೆರೆಗಳನ್ನು ರಾಜರಿಗೆ ಮಗ ಹುಟ್ಟಿದರೆ ಪುತ್ರೋತ್ಸವ ಕಾಣಿಕೆ, ಕುಮಾರನು ನಾಡಿನ ಮೇಲೆ ಬಂದರೆ ಕುಮಾರ ಕಾಣಿಕೆಯನ್ನು, ಸಿಂಹಾಸನ ಹತ್ತಿದರೆ ಸಿಂಹಾಸನರೋಹಣ ಕಾಣಿಕೆಯನ್ನು ಕೊಡಬೇಕಿತ್ತು. ಇವಿಷ್ಟು ಮಾತ್ರವಲ್ಲದೆ ಕುದುರೆ, ಆನೆಗಳಿದ್ದರೂ ಅರಸನಿಗೆ ಒಪ್ಪಿಸಬೇಕಾಗುತ್ತಿತ್ತು. ಇಷ್ಟೆಲ್ಲಾ ತೆರಿಗೆಗಳು ಜನರಿಗೆ ಹೊರಲಾರದವುಗಳಾಗಿದ್ದುದು ಮಾತ್ರವಲ್ಲ ಅವುಗಳನ್ನು ಕೊಡಲಾಗದೆ ಜನರು ಊರುಗಳನ್ನು ಬಿಟ್ಟು ಹೋದ ಸಂದರ್ಭಗಳು ಶಾಸನದಲ್ಲಿಯೆ ಸಿಗುತ್ತದೆ.

"೧೦೭೨ರ ಕೋಲಾರ ಶಾಸನವೊಂದರಲ್ಲಿ ಎಮ್ಮೆಗಳ ಮೇಲೆ ಬಹಳ ಕಾಲದಿಂದಲೂ ಸುಂಕವಿಲ್ಲದ್ದರಿಂದ ಅದನ್ನು ಕೊಡುವುದಿಲ್ಲವೆಂದು ಪ್ರತಿಭಟಿಸಿದ ವಿವರಗಳಿವೆ."[೧] ಅರಸ, ಮಠ, ಅಧಿಕಾರಿ ಮತ್ತು ವ್ಯಾಪಾರಿಗಳಿಂದ ಶೋಷಿತರಾದ ವೃತ್ತಿ ಜೀವಿಗಳು ತಮ್ಮದೇ ಆದಂತಹ ಗುಂಪುಗಳನ್ನು ಹೊಂದಿದ್ದರು. ಈ ಗುಂಪುಗಳು ಜೇಡಗೊತ್ತಳ, ಕಂಚುಗಾರಗೊತ್ತಳಿ, ಬೆವ್ವೆಗೊತ್ತಳಿ, ಗಾಣಒಕ್ಕಲು ಎಂದು ಶಾಸನಗಳಲ್ಲಿ ಬರುತ್ತದೆ. ಇವು ಕೆಲಸವನ್ನು ಮಾಡುವವರು ಒಟ್ಟಾಗಿ ಬದುಕುವ ಗುಂಪುಗಳಾಗಿದ್ದವೆ ವಿನಹ ಬೇರೆ ಯಾವುದೇ ರೀತಿಯ ಶಕ್ತಿಯನ್ನು ಹೊಂದಿರುವುದಿಲ್ಲ. ತಾವು ತಯಾರಿಸಿದ ವಸ್ತುಗಳು ಬೆಲೆ ನಿರ್ಧಾರದಿಂದ ಹಿಡಿದು ವ್ಯಾಪಾರಿ ಸಮುದಾಯದ ಲಾಭಾಂಶವನ್ನು ನಿಯಂತ್ರಿಸಲು ಕೂಡ ಇವುಗಳಿಗೆ ಸಾಧ್ಯವಿರಲಿಲ್ಲ. ವ್ಯಾಪಾರಿಗಳು ಕೂಲಿ ಆಳುಗಳಂತೆ ಬಹಳ ಕಡಿಮೆ ಕೂಲಿ ಹೆಚ್ಚು ಕೆಲಸ ಮಾಡಬೇಕಿತ್ತು. ಅವರ ದುಡಿಮೆಯ ಬಹುಪಾಲನ್ನು ವರ್ತಕರೇ ಕಬಳಿಸಿ ಬಿಡುತ್ತಿದ್ದರು. ರಾಜನ ತೆರಿಗೆಗಳಿಗೆ ಮತ್ತು ವರ್ತಕರ ಶೋಷಣೆಗಳಿಗೆ ಸಿಕ್ಕ ಈ ಜನ ಮಠಗಳು ಮತ್ತು ದೇವಾಲಯಗಳಿಗೂ ಸಮಾಜದ ಇಕ್ಕಟ್ಟಿಗೂ ಸಿಕ್ಕಿ, ಬಿಟ್ಟಿ ಕೆಲಸ ಮಾಡಬೆಕಾದ ಪರಿಸ್ಥಿತಿಯಿತ್ತು. ಇಷ್ಟೊಂದು ತೆರಿಗೆಗಳ ಬಾರದಿಂದ ಕಾಯಕ ಜೀವಿಗಳು ಮತ್ತದರ ಪ್ರಜೆಗಳೂ ತತ್ತರಿಸಿದ್ದರೂ. ಇವರನ್ನು ಕೈಯಲ್ಲಿ ಹಿಡಿದುಕೊಂಡಿದ್ದ ವರ್ತಕರು ತುಂಬ ಪ್ರಭಾವಶಾಲಿ ವ್ಯಕ್ತಿಗಳಾಗಿದ್ದರು. ದೇಶದ ವ್ಯಾಪಾರವನ್ನೆಲ್ಲಾ ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದು ಮಾತ್ರವಲ್ಲದೆ ಇವರಲ್ಲಿ ಅನೇಕ ಶ್ರೇಣಿಗಳು ಚಿಕ್ಕ, ಚಿಕ್ಕ ಸೈನ್ಯಗಳನ್ನು

---

೧. ವೀರಶೈವ ಧರ್ಮ ದರ್ಶನ, ಪ್ರಧಾನ ಸಂಪಾದಕರು, ಯು.ಆರ್.ಅನಂತಮೂರ್ತಿ, ಪು. ೨೪೩.

ಇಟ್ಟುಕೊಂಡಿದ್ದವು. ಅನೇಕ ವರ್ತಕರು ರಾಜನ ಸ್ನೇಹಿತನೂ ಆಗಿ ರಾಜಧಾನಿಯ ಮೂಲಸ್ತಂಭ ವಾಗಿದ್ದರು. ರಾಜರ ಬೆಂಬಲದಿಂದ ಇವರು ಧರ್ಮದರ್ಶಿಗಳಂತೆ ದೇವಾಲಯ, ಕೆರೆಗಳು, ಕಾನೂನು ಪಾಲನೆ ಇವುಗಳ ಉಸ್ತುವಾರಿಯನ್ನು ಮಾಡುತ್ತಾ ಪಟ್ಟಣಸ್ವಾಮಿಗಳು ಎನಿಸಿಕೊಂಡಿದ್ದರು. ಇವರು ವೃತ್ತಿ ಜೀವಿಗಳಿಂದ ಮೂರಕ್ಕೆ ತೆಗೆದುಕೊಂಡು ಆರಕ್ಕೆ ಮಾರುತ್ತಿದ್ದರು. ಇದಕ್ಕಾಗಿ ಕಾಯಕ ಜೀವಿಗಳು ಇವರನ್ನು ವಿರೋಧಿಸುವ ಅವಕಾಶಕ್ಕಾಗಿ ಕಾಯುತ್ತಿದ್ದರು ಎಂಬ ಅಂಶವೂ ವ್ಯಕ್ತವಾಗುತ್ತದೆ.

ಬಸವಣ್ಣ ಮತ್ತು ಇತರ ವಚನಕಾರರು ಬ್ರಾಹ್ಮಣರನ್ನು ಮತ್ತು ಅವರು ಕಲಿಸುತ್ತಿದ್ದ ವಿದ್ಯೆಯನ್ನು ವಿರೋಧಿಸಿದ್ದು ಮಾತ್ರವಲ್ಲದೆ ದೇವಾಲಯವನ್ನು ಅಲ್ಲಿಯೇ ಇದ್ದ ಮಠಗಳ ಗುರುಗಳನ್ನು ವಿರೋಧಿಸಿರುವುದರ ಹಿನ್ನೆಲೆಗೆ ಅನೇಕ ಕಾರಣಗಳಿದ್ದವು. ಅಗ್ರಹಾರದಲ್ಲಿ ವಾಸಿಸುತ್ತಿದ್ದ ಜನಗಳ ಬೇರೆ ಜಾತಿಯವರು ಯಾರೇ ಇದ್ದರು ಆ ಊರಿನ ರಾಜದಾಯವೆಲ್ಲ ಆ ಮಹಾಜನಗಳಾದ ಬ್ರಾಹ್ಮಣರಿಗೆ ಸೇರುತ್ತಿತ್ತು. ಅನೇಕ ಅಗ್ರಹಾರಗಳಿಗೆ ತೆರಿಗೆಗಳನ್ನು ರಾಜನು ತೆಗೆದು ಹಾಕಿರುವುದನ್ನು ಶಾಸನಗಳು ಹೇಳುತ್ತವೆ. ಅದೂ ಅಲ್ಲದೆ ರಾಜರು ಅಧಿಕಾರಿಗಳು, ಶ್ರೀಮಂತರು ಮೊದಲಾದವರು ವಿದ್ಯಾಭ್ಯಾಸಕ್ಕೆ ಯಥೇಚ್ಛವಾದ ದಾನದತ್ತಿಗಳನ್ನು ಕೊಡುತ್ತಿದ್ದರು. ಅಗ್ರಹಾರಗಳು ತೆರಿಗೆ ಕೊಡಬೇಕೆಂದು ಪೀಡಿಸಿದಾಗ ಅದರ ವಿರುದ್ಧ ಹೋರಾಡಿ ಮಡಿದವರು ಒಂಭತ್ತು ಹತ್ತನೇ ಶತಮಾನಕ್ಕೆ ಸೇರಿದ ಶಾಸನಗಳಲ್ಲಿ ಕಂಡುಬರುತ್ತದೆ. ಈ ಅಗ್ರಹಾರಗಳಲ್ಲಿ ವೈಧಿಕರಿಗೆ ಬೇಕಾದ ವಿದ್ಯಾಭ್ಯಾಸವನ್ನು ಕಲಿಸಲಾಗುತ್ತಿತ್ತು. ಅದು ಧಾರ್ಮಿಕ ವಿದ್ಯೆಯಾಗಿದ್ದು ಮೋಕ್ಷ ಸಾಧನೆಯ ಮಾರ್ಗದಲ್ಲಿ ಮೆಟ್ಟಲೆಂದು ಭಾವಿಸಲಾಗುತ್ತಿತ್ತು. ಇದರಿಂದ ಹೊರಗುಳಿದ ಜನ ತಮ್ಮ ಭಾಷೆಯಲ್ಲಿ ಅದರದೇ ಆದ ಮಾತುಗಳಲ್ಲಿ ತಮ್ಮ ನೋವು ಆಸೆ-ಆಕಾಂಕ್ಷೆಗಳನ್ನು ಮುಂದೆ ವ್ಯಕ್ತಪಡಿಸಲು ಮೂಲವಾಗಿದೆ. ಅಗ್ರಹಾರಗಳು ರಾಜಕೀಯವಾಗಿ ಈ ಕಾಲದಲ್ಲಿ ಅಷ್ಟೇನೂ ಪ್ರಮುಖ ಪಾತ್ರವಹಿಸುವಂತಿರಲಿಲ್ಲ. ಹನ್ನೊಂದನೇ ಶತಮಾನದ ಮಧ್ಯಭಾಗದಿಂದ ಇಳಿಮುಖವಾದ ಜೈನ ಧರ್ಮದ ಜಾಗದಲ್ಲಿ ಶೈವಧರ್ಮ ಬೆಳವಣಿಗೆಯನ್ನು ಹೊಂದಿತ್ತು. ದೇವಾಲಯಗಳ ನಿರ್ಮಾಣ ವಿಚಾರದಲ್ಲಿ ವೈಷ್ಣವರು ಒಂಭತ್ತನೇ ಶತಮಾನದಲ್ಲಿ ಕಟ್ಟಿಸಿದ ಒಂದೆರಡನ್ನು ಬಿಟ್ಟರೆ ಹತ್ತರಿಂದ ಹನ್ನೆರಡನೇ ಶತಮಾನದಲ್ಲಿ ಶೈವರಿಂದ ಬಹಳಷ್ಟು ದೇವಾಲಯಗಳು ನಿರ್ಮಾಣಗೊಂಡವು. ಕಾಳಾಮುಖ-ಪಾಶುಪತ ಸಂಪ್ರದಾಯಕ್ಕೆ ಸಂಬಂದಿಸಿದ ಈ ಶೈವರು ಉತ್ತರದಿಂದ ದಕ್ಷಿಣಕ್ಕೆ ಬಂದು ದೇವಾಲಯಗಳಲ್ಲಿ ನೆಲೆಸಿದರು. ಅಗ್ರಹಾರದಂತೆಯೇ ಮಠಗಳನ್ನು ಸ್ಥಾಪಿಸಿ ವಿದ್ಯಾಕೇಂದ್ರಗಳನ್ನಾಗಿ ಮಾಡಿದರು.

ಮಠದ ಮತ್ತು ದೇವಸ್ಥಾನದ ಅಸ್ತಿಯು ಒಂದೇ ಆಗಿತ್ತು. ಈ ದೇವಾಲಯಗಳಿಗೆ ಸೇವೆ ಸಲ್ಲಿಸಲು ಜನ ಹಿಂತೆಗೆದರೆ ಅಂತವರನ್ನು ಜಾತಿಯಿಂದ ಹೊರಹಾಕುತ್ತಿದ್ದರು. ಈ ಮಠಗಳಲ್ಲಿನ ಕೆಲವರು ಬಹಳ ಪ್ರಭಾವಶಾಲಿಗಳಾಗಿದ್ದರು. ಇವರು ರಾಜಗುರುಗಳೆಂದು ಕರೆಸಿಕೊಂಡಿದ್ದಾರೆ. "ಧಾರಾವಾಡ ಜಿಲ್ಲೆಯ ಸೊಂಕಿ ಅರ್ಕೇಶ್ವರ ದೇವಾಲಯಗಳಲ್ಲಿ ಒಂದು ಸಾವಿರ ಮಂದಿ ಕೆಲಸಗಾರರಿದ್ದು ಮಠ ಅವರನ್ನು ಸಾಕುತ್ತಿತ್ತೆಂದು ಶಾಸನ ಹೇಳುತ್ತದೆ."[೧]

ದೇವಸ್ಥಾನದ ವ್ಯವಸ್ಥೆ ಶೋಷಣೆಗೆ ಮೂಲವಾದಂತೆಯೇ ಅವ್ಯವಹಾರಗಳ ನಿರಾಕರಣವನ್ನು ತಮ್ಮ ಧ್ಯೇಯಗಳಲ್ಲಿ ಒಂದಾಗಿ ಅಂಗೀಕರಿಸಿದರು. ವಚನಕಾರರು ಪ್ರತಿಭಟನೆ ವ್ಯಕ್ತಮಾಡಿರುವ ದೇವಾಲಯಗಳು ಬೇರೆ ಯಾವುದೂ ಆಗಿರದೆ ಶೈವ ದೇವಾಲಯಗಳೇ ಆಗಿದ್ದವೆಂಬುದನ್ನು ತಿಳಿಯಬಹುದು. ಏಕೆಂದರೆ ಆ ಕಾಲಕ್ಕೆ ಶೈವೇತರವಾದ ಯಾವ ದೇವಾಲಯಗಳೂ ಪ್ರಭಾವಶಾಲಿಯಾಗಿರಲಿಲ್ಲ. ರಾಜನ ತೆರಿಗೆಗಳಿಂದ ಮಠ ದೇವಾಲಯಗಳ ಸುಲಿಗೆಯಿಂದ ವರ್ತಕರ ಕಪಿಮುಷ್ಟಿಯಿಂದ ತಪ್ಪಿಸಿಕೊಳ್ಳುವ ಕಾತುರ ಮೊದಲು ಕಾಣಿಸಿದ್ದು, ಕಾಯಕ ಜೀವಿಗಳಲ್ಲಿ ಈ ಕಾಯಕ ಜೀವಿಗಳ ಪ್ರತಿನಿಧಿಗಳಾಗಿ ಜೇಡರದಾಸಿಮಯ್ಯ ಡೋಹರ ಕಕ್ಕಯ್ಯ ಮೊದಲಾದವರು ಕಾಣಿಸುತ್ತಾರೆ. ಕಾಯಕ ಜೀವಿಗಳ ಈ ಬಗೆಯ ಗುಂಪುಗಳಿದ್ದುದರಿಂದ ಅವರುಗಳು ಸುಲಭವಾಗಿ ಕಲ್ಯಾಣದಲ್ಲಿ ಬಸವಣ್ಣನ ಸುತ್ತ ಸಹಕಾರಿಯಾಯಿತು. ಬಟ್ಟೆ ನೇಯುವ ದಾಸಿಮಯ್ಯನನ್ನಾಗಲೀ ಅಥವಾ ಅವನಂಥವರನ್ನಾಗಲೀ ಶೈವರು ಒಳಗೆ ಬಿಟ್ಟುಕೊಳ್ಳುವುದು ಸಾಧ್ಯವಾಗದ ಮಾತು ದೇವಾಲಯಗಳ ಮಠಗಳಲ್ಲಿ ಕಲಿಸುತ್ತಿದ್ದ ವಿದ್ಯೆ ವೇದ ಮತ್ತು ಆತ್ಮಜ್ಞಾನ ವಿದ್ಯೆ, ಕೀಳುಜಾತಿಯವರಾರು ಅದನ್ನು ಕಲಿಯಲು ಅರ್ಹವಾಗಿಲ್ಲದ್ದಿದುದರಿಂದ ಅವರು ಅಂದಂದಿನ ಜೀವನೋಪಾಯಕ್ಕೆ ದಿನನಿತ್ಯದ ಬದುಕಿಗೆ ಬೇಕಾದ ವಸ್ತುಗಳನ್ನು ಉತ್ಪಾದಿಸಿ ಬದುಕುವುದು ಅನಿವಾರ್ಯವಾಯಿತು. ವಸ್ತುಗಳ ಉತ್ಪಾದನೆಯಲ್ಲಿ ಕುಶಲತೆಯನ್ನು ತೋರಿಸುವವರೂ ಈ ಗುಂಪಿನವರೇ ಆದರೂ ಇಂತಹದೊಂದು ಗುಂಪಿನ ನಾಯಕತ್ವ ಜೇಡರದಾಸಿಮಯ್ಯನ ಮೂಲಕ ಪ್ರತಿಫಲಿತವಾಗಿ ಮಠಗಳನ್ನೇ ಬಹಿಷ್ಕರಿಸಲು ತೊಡಗಿತು. ಅದು ಬಸವಣ್ಣನ ಕಾಲದಲ್ಲಿ ಹೆಚ್ಚು ಪ್ರಮುಖವಾಗಿ ವ್ಯಕ್ತವಾಯಿತು. ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದಿಸುವ ವೈಷ್ಣವ ಧರ್ಮದ ಬಸವಣ್ಣನಿಗಿಂತ ನೂರಾರು ವರ್ಷ ಮೊದಲೇ ಇದ್ದು. ಆ

---

೧. ವೀರಶೈವ ಧರ್ಮದರ್ಶನ, ಪ್ರಧಾನ ಸಂಪಾದಕರು, ಯು.ಆರ್.ಅನಂತಮೂರ್ತಿ. ಪು.೨೪೫.

ಪೂರ್ವದ ವೈಷ್ಣವ ಪ್ರವಾಹಕ್ಕೆ ಹನ್ನೆರಡನೆಯ ಶತಮಾನದಲ್ಲಿ ತಮಿಳುನಾಡಿನ ಶ್ರೀರಾಮಾನುಜರ ಶ್ರೀ ವೈಷ್ಣವ ಧರ್ಮ ಪ್ರವಾಹವು ಬಂದು ಸಂಗಮಿಸಿತು. ವಚನಕಾರರು ಒಪ್ಪಿಕೊಂಡ ವೀರಶೈವ ಧರ್ಮವು ಶಿವಸರ್ವೋತ್ತಮತ್ವನ್ನು ಒಪ್ಪಿಕೊಂಡಿದ್ದರಿಂದ ಮೊದಲಿನಿಂದಲೂ ಇವೆರಡಕ್ಕೂ ಘರ್ಷಣೆಗಳು ನಡೆಯುತ್ತಲೇ ಇದ್ದವು. ಶ್ರೀ ವೈಷ್ಣವಧರ್ಮವು ಭಕ್ತಿಯನ್ನು ಪ್ರತಿಪಾದನೆ ಮಾಡಿದರೂ ರಾಮಾನುಜರಂತಹ ಉದಾರಹೃದಯರು ಸಾಮಾನ್ಯ ಜನರ ಬಗ್ಗೆ ಮತ್ತು ಹರಿಜನರ ಬಗ್ಗೆ ಸಹಾನುಭೂತಿಯ ಮನೋಭಾವವನ್ನು ತೋರಿದ್ದರೂ ಶೈವಧರ್ಮಕ್ಕಿಂತ ವೈಷ್ಣವ ಧರ್ಮವು ಹೆಚ್ಚಿ ವೈಧಿಕ ಪರವಾಗಿದ್ದುದರಿಂದಲೋ ಏನೋ ವಚನಕಾರರು ಒಟ್ಟಾರೆ ವೈಷ್ಣವ ಧರ್ಮವನ್ನು ತೀವ್ರವಾಗಿ ವಿರೋಧಿಸಿದ್ದಾರೆ. ವೈದಿಕವಾದನ್ನು ಖಂಡಿಸಲು ಮುಖ್ಯಕಾರಣ ಅದರ ಕರ್ಮಜಡತೆ ಮತ್ತು ಭಕ್ತಿಗೆ ಅಲ್ಲಿ ಪ್ರಧಾನ್ಯವಿಲ್ಲದಿರುವುದು.

ಬಸವಣ್ಣನ ಕಾಲದಲ್ಲಿ ಪ್ರಬಲವಾಗಿದ್ದ ಜೈನದರ್ಮವು ಬಹುತೇಕ ವ್ಯಕ್ತಿಯ ಬಿಡುಗಡೆಯನ್ನು ಒತ್ತಿ ಹೇಳುವಂತದ್ದಾಗಿತ್ತು. ಈ ಲೋಕದ ಜೀವನದ ಬಗ್ಗೆ ತಿರಸ್ಕಾರವನ್ನು ಬೆಳೆಸಿಕೊಳ್ಳಲು ಬೋಧಿಸುವಂತದ್ದಾಗಿದ್ದು ಈ ಲೋಕದ ಜೀವನದ ಬಗ್ಗೆ ವೈರಾಗ್ಯ ಪದದ ಬಗ್ಗೆ ಅಷ್ಟೇ ತೀವ್ರವಾದ ತುಡಿತಗಳು ಜೈನಧರ್ಮದ ಪ್ರಮುಖ ಸ್ತೋತ್ರವೇನಿದ್ದರೂ ಅವನ ಮನಸ್ಸಿನ ಸಂಸ್ಕಾರಕ್ಕೆ ಹೊರತು, ಅವನು ಭಕ್ತಿಯ ಕರೆಯನ್ನು ಕೇಳಿ ಬಂದು ಉದ್ದರಿಸುವ ಯಾವ ಶಕ್ತಿಯನ್ನು ಆ ಧರ್ಮ ಒಪ್ಪಿಕೊಳೂವುದಿಲ್ಲ.

ಈ ಎಲ್ಲಾ ಮತಗಳ ಹಿನ್ನೆಲೆಯಲ್ಲಿ ವಚನಕಾರರನ್ನು ನೋಡಬೇಕು ಮತ್ತು ಆ ಕಾಲದ ಸಾಮಾಜಿಕ ಪರಿಸ್ಥಿತಿಯೂ ವಚನಕಾರರ ಆಂದೋಲನಕ್ಕೆ ಸಹಕಾರಿಯಾಗಿದ್ದಿತೆಂದು ಹೇಳಲು ಸಾಧ್ಯವಿದೆ. ಬಹು ಹಿಂದಿನಿಂದಲೂ ಹಿಂದೂ ಸಮಾಜವು ಜಾತಿ ಪ್ರಧಾನವಾದುದಾಗಿ ಒಡೆದಿರುವುದು ಎಲ್ಲರಿಗೂ ತಿಳಿದಿರುವ ಸಂಗತಿ. ಜಾತಿಮುಖ್ಯವಾಗಿ ವ್ಯಕ್ತಿಯ ಹುಟ್ಟಿನಿಂದಲೇ ನಿರ್ಣೀತವಾಗಿರುತ್ತದೆ. ಮತ್ತು ಒಂದು ಜಾತಿಯಲ್ಲಿ ಹುಟ್ಟಿದ ವ್ಯಕ್ತಿಗೆ ಆ ಜಾತಿಯಿಂದ ಬಿಡುಗಡೆ ಎಂಬುದಿರುವುದಿಲ್ಲ. ಜಾತಿಗಳಲ್ಲಿ ಮೆಲುಕೀಳುಗಳೆಂಬ ಒಂದು ಅನುಶ್ರೇಣಿ ನಿರ್ಮಾಣವಾಗಿ ಒಬ್ಬ ವ್ಯಕ್ತಿ ಒಂದು ಜಾತಿಯಲ್ಲಿ ಹುಟ್ಟಿದ್ದೆ ಕಾರಣವಾಗಲು ತಾನು ಉಳಿದವರಿಗಿಂತ ಶ್ರೇಷ್ಠನೆಂದು ಭಾವಿಸಲು ಮತ್ತು ಇನ್ನೊಬ್ಬ ವ್ಯಕ್ತಿ ತಾನು ತನ್ನ ಜಾತಿಯಲ್ಲಿ ಹುಟ್ಟಿದ್ದೆ ಕಾರಣವಾಗಿ ಉಳಿದವರಿಗಿಂತ ತಾನು ಹೀನ ಎಂದು ಭಾವಿಸಲು ಅವಕಾಶವಾಗುತ್ತದೆ. ಈ ಮೇಲು ಕೀಳುಗಳು ವಾಸ್ತವವಾಗಿ ಮನುಷ್ಯ ನಿರ್ಮಿತ ಆದರೆ ಇಲ್ಲಿ ಸ್ವಾರ್ಥದ ಭಾವನೆಗಳು

ಇಣುಕಿ ಹಾಕುತ್ತವೆ. ಉದಾಹರಣೆಗೆ ಮೇಲು ಜಾತಿಯವನು ತನ್ನ ಅನುಕೂಲಕ್ಕೆ ಕೆಳಜಾತಿಯವರನ್ನು ಉಪಯೋಗಿಸಿಕೊಳ್ಳಬೇಕಾದರೆ ತಾವು ಕೀಳು ಎಂಬ ಭಾವನೆಯನ್ನು ಈ ಕೆಳಜಾತಿಯವರಲ್ಲಿ ಸುಸ್ಥಿರವಾಗಿ ಊರಬೇಕಾಗುತ್ತದೆ. ಇದಕ್ಕೆ ಒಂದೇ ಮಾರ್ಗ ಮೇಲುಜಾತಿ ಮತ್ತು ಕೆಳಜಾತಿ ಎಂಬುವು ಮನುಷ್ಯ ನಿರ್ಮಾಣಗಳಲ್ಲಿ ದೈವ ನಿರ್ಮಾಣಗಳೆನ್ನುವ ದಂತಕತೆಯನ್ನು ಹುಟ್ಟಿಸುವುದು. ಆ ದಂತಕಥೆ ಕಾಲಕಳೆದಂತೆ ಚಲಾವಣೆ ಪಡೆಯುತ್ತ ನಿಜವಾಗುತ್ತವೆ. ಆಗ ಶೋಷಣೆ ಸುಲಭವಾಗುವುದು. ಶೋಷಣೆ ಒಂದು ರೂಪದ್ದಾಗಿರುತ್ತದೆ ಎಂದು ಭಾವಿಸಬೇಕಾಗಿಲ್ಲ ಮನುಷ್ಯನಿಗೆ ಸಾಮಾಜಿಕ ಸ್ಥಾನ ಅಧಿಕಾರ ಮತ್ತು ಹಣ ಇವು ಮೂರು ಬೇಕು. ಇವುಗಳನ್ನು ಪಡೆಯಬಯಸುವರು ಒಂದಲ್ಲ ಒಂದು ರೀತಿಯ ಸೂಕ್ಷ್ಮವು ಕೆಲವೆಡೆ ಸ್ಪಷ್ಟವೂ ಆದ ಶೋಷಣೆಗೆ ಕೈಹಾಕುತ್ತಾರೆ. ಪ್ರಾಚೀನ ಕರ್ನಾಟಕ ಬ್ರಾಹ್ಮಣರಿಗೆ ಹುಟ್ಟಿನಿಂದಲೇ ಒಂದು ಸ್ಥಾನ ಲಭ್ಯವಾಗುತ್ತದೆ. ಜ್ಞಾನದ ಕೀಲಿಯನ್ನು ಹಿಡಿದಿದ್ದ ಇವರ ಸಲಹೆ, ಸೂಚನೆ, ಮಾರ್ಗದರ್ಶನಗಳು ಆಳುವವರಿಗೆ ಬೇಕು. ರಾಜರು ಅವರಿಗೆ ಸಮೃದ್ಧವಾಗಿ ದತ್ತಿಗಳನ್ನು ಕೊಡುವುದರ ಮೂಲಕ ಮತ್ತು ಅವರಿಗೆ ರಾಜ್ಯದಲ್ಲಿ ಬಹುಮುಖ್ಯ ಅಧಿಕಾರ ಸ್ಥಾನಗಳನ್ನು ಕೊಡುವುದರ ಮೂಲಕ ಮತ್ತು ಅವರಿಗೆ ರಾಜ್ಯದಲ್ಲಿ ಬಹುಮುಖ್ಯ ಅಧಿಕಾರ ಸ್ಥಾನಗಳನ್ನು ಕೊಡುವುದರ ಮೂಲಕ ಅವರ ಸಹಕಾರವನ್ನು ಗೆದ್ದುಕೊಳ್ಳುತ್ತಿದ್ದರು. ಆ ಸ್ಥಾನಗಳಲ್ಲಿದ್ದುಕೊಂಡು ರಾಜಾಶಿರ್ವಾದವನ್ನು ರಾಜ ಪ್ರಶಂಸೆಯನ್ನು ಮಾಡಿ ಬ್ರಾಹ್ಮಣರು ತಮಗೆ ದೊರೆತ ದತ್ತಿಗಳ ಸಹಾಯದಿಂದ ಜೀವಿತರನ್ನು ನಡೆಸುತ್ತಿದ್ದರು. ರಾಜ್ಯಾದಯದ ದೃಷ್ಟಿಯಿಂದ ವರ್ತಕರು ದೇಶದ ಬಹುಮುಖ್ಯ ಭಾಗವಾಗುತ್ತಾರೆ. ಈ ಮೂವರು ತಮ್ಮ ಸೌಲಭ್ಯವನ್ನು ಬೆಳೆಸಿಕೊಳ್ಳುವುದು ಬಹು ಸಂಖ್ಯಾತರಾಗಿದ್ದ ಸಾಮಾನ್ಯ ವರ್ಗದವರಿಂದ ಕರ್ನಾಟಕದ ಸಾವಿರಾರು ಶಾಸನಗಳನ್ನು ನೋಡಿದರೆ ಅಲ್ಲೆಲ್ಲ ತುಂಬಿರುವುದು ಅಥವಾ ಎದ್ದು ಕಾಣುವುದು ಮೇಲಿನ ಮೂರು ವರ್ಗಗಳ ಕತೆಯೇ ಬೌದ್ಧಿಕ ಅಥವಾ ಧಾರ್ಮಿಕ ಚಟುವಟಿಕೆಗಳಿಂದ ಅಧಿಕಾರ, ಐಶ್ವರ್ಯಗಳಿಂದ ದೂರವಾದ ಸಾಮಾನ್ಯ ಜನತೆಯು ಇರುವುದು ಯಾರಾದರೂ ಶ್ರೀಮಂತರು ದೇವಸ್ಥಾನ ಕಟ್ಟಿಸಿದರೆ ಅದಕ್ಕೆ ತಮ್ಮ ಕೈಲಾದಷ್ಟು ದತ್ತಿ ಕೊಡುವುದಕ್ಕೆ ದುಡಿದು ದೇಶದ ಸಂಪತ್ತನ್ನು ಹೆಚ್ಚಿಸುವುದಕ್ಕೆ ಮತ್ತು ಯುದ್ಧಗಳಲ್ಲಿ ಹೋರಾಡಿ ಸಾಯುವುದಕ್ಕೆ ಈ ಸಾಮಾನ್ಯರೇ ನಿಜವಾಗಿಯೂ ದೇಶದ ಆಸ್ತಿ ಅಥವಾ ಅವರೇ ನಿಜವಾಗಿ ದೇಶ ಆದರೆ ಅವರ ಸೌಲಭ್ಯಗಳನ್ನು ತಮ್ಮ ಸುಖಕ್ಕೆ ಹರಿಸಿಕೊಂಡ ರಾಜರ, ದಂಡನಾಯಕರ, ಮಂತ್ರಿಗಳ, ಪುರೋಹಿತರ,

ವರ್ತಕರ ಕತೆಗಳನ್ನು ದಾನ ಶಾಸನಗಳನ್ನು ಸುದೀರ್ಘವಾಗಿ ಬಣ್ಣಿಸುತ್ತವೆ. ಚಿಕ್ಕ ಚಿಕ್ಕ ಪಾಠವಿರುವ ವೀರಗಲ್ಲುಗಳಲ್ಲಿ ಸಾಮಾನ್ಯರ ಕತೆ ದೊರಕುತ್ತದೆ. ಸುಖ ಪಡಲು ಇದು ಮನುಕುಲವ ಶಾಶ್ವತ ಇತಿಹಾಸವೂ ಹೌದು.

ಈ ಸಾಮಾನ್ಯ ವರ್ಗದಲ್ಲಿ ಹತ್ತಾರು ಜಾತಿಗಳು, ಉಪಜಾತಿಗಳು ಒಂದೊಂದು ಬೇರೆ ಬೇರೆ ಕಸುವನ್ನು ಅವಲಂಬಿಸಿದ್ದಿತು ಮತ್ತು ಹಳ್ಳಿಗಳಲ್ಲಿ ಆಯಾ ಜಾತಿಯ ಜನ ಒಟ್ಟಿಗೆ ವಾಸಿಸುತ್ತಿದ್ದರು. ಸಾಮಾನ್ಯವಾಗಿ ವ್ಯಕ್ತಿ ತನ್ನ ಜಾತಿಯವರಿಗೆ ತನ್ನನ್ನು ತಾನು ಸಂಪೂರ್ಣವಾಗಿ ಏಕೀಕರಿಸಿಕೊಳ್ಳುತ್ತಿದ್ದರಿಂದ ತನ್ನ ಜಾತಿಗೆ ಸಾಮಾಜಿಕವಾಗಿ ದೊರೆತ ಸ್ಥಾನವನ್ನು ಅವನು ಪ್ರಶ್ನಿಸುವ ಗೋಜಿಗೆ ಹೋಗುತ್ತಿರಲಿಲ್ಲ. ತನಗೆ ಸಮೀಪದಲ್ಲೇ ನಿಂತಿರುವ ಜಾತಿಯ ಕಟ್ಟುಪಾಡು ಅದರಾಚೆ ಅಧಿಕಾರ, ಹಣ, ಧಾಮಿಕ ಬಹಿಷ್ಕಾರ ಇವೆಲ್ಲ ಕೈಯಲ್ಲಿ ಚಾಟಿ ಹಿಡಿದು ನಿಂತಿರುವಾಗ ಪ್ರತಿಭಟಿಸಬೇಕೆನ್ನುವ ವ್ಯಕ್ತಿಯು ಮತ್ತೊಮ್ಮೆ ಯೋಚನೆ ಮಾಡುವಂತಾಗಿದೆ. ಈ ಸಾಮಾನ್ಯ ವರ್ಗದಲ್ಲೇ ಸ್ಪಷ್ಟವಾಗಿ ಎರಡು ಗುಂಪು ಒಂದು ಸ್ಪೃಶ್ಯರು ಮತ್ತೊಂದು ಅಸ್ಪೃಶ್ಯರು. ಈ ಯಾವ ತುಳಿತ ಶೋಷಣೆಗಳನ್ನು ಮೇಲುವರ್ಗದಿಂದ ಅನುಭವಿಸಿದರೋ ಅದನ್ನು ಅಸ್ಪೃಶ್ಯರ ಮೇಲೆ ತೀರಿಸಿದರು. ಅವರನ್ನು ಕಡೆಗಣಿಸಿ ಊರ ಹೊರಗಿಟ್ಟು ತಾವು ಕಲೆದುಕೊಂಡಿದ್ದ ಆತ್ಮಾಭಿಮಾನದ ನಷ್ಟವನ್ನು ಆ ಮೂಲಕ ತುಂಬಿಕೊಂಡರು.

ಈ ಸಾಮಾಜಿಕ ಏಣಿಯ ಮೇಲ್ತುದಿಯಲ್ಲಿ ಬ್ರಾಹ್ಮಣರು, ತೀರ ಕೆಳಗೆ ನೆಲದಲ್ಲಿ ಹೋಗಿರುವ ಭಾಗದಲ್ಲಿ ಅಸ್ಪೃಶ್ಯರು. ಇದು ಆ ಕಾಲದ ಚಿತ್ರಣ. ಈ ಎರಡರ ಅಂತರದಲ್ಲಿ ಬೇರೆ ಬೇರೆ ಜಾತಿಗಳು ಆಯಾ ಜಾತಿಯಲ್ಲೇ ಶ್ರೀಮಂತರು, ಮಧ್ಯಮ ವರ್ಗದವರು, ಬಡವರು ಎಂಬ ವರ್ಗಗಳು, ಸ್ತ್ರೀ ಒಟ್ಟಾರೆ ಗಂಡಿಗಿಂತ ಕೀಳು ಎಂಬ ಸಾರ್ವತ್ರಿಕ ಭಾವನೆ ಎಲ್ಲಾ ಜಾತಿಗಳಿಗೂ ಸಮಾನವಾದುದಾಗಿದೆ. ಈ ವ್ಯವಸ್ಥೆ ಹಾಗೇ ಮುಂದುವರಿಯುವುದರಲ್ಲಿ ಮೇಲಿನವರಿಗೆ ಬಹಳ ಅನುಕೂಲಗಳಿವೆ. ಹನ್ನೊಂದನೆಯ ಶತಮಾನದವರೆಗೂ ಇದು ಮುಂದುವರಿದುಕೊಂಡು ಬಂದಿತು. ಈ ಶತಮಾನದ ಉತ್ತರಾರ್ಧದಲ್ಲಿಯೇ ಅಥವಾ ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿಯೇ ಅದನ್ನು ಕೆಲವರಾದರೂ ಪ್ರತಿಭಟಿಸುವುದಕ್ಕೆ ಸೂಚನೆಗಳಿವೆ. ಇದಕ್ಕೆ ಪ್ರಚೋದನೆ ಧೈರ್ಯಗಳು ಎಲ್ಲಿಂದ ಬಂದುವೆಂಬುದನ್ನು ಹೇಳುವುದು ಕಷ್ಟ. ಬಸವಪೂರ್ವ ಯುಗದಲ್ಲಿ ಕಂಡುಬರುವ ಪ್ರತಿಭಟನೆ ಮುಖ್ಯವಾಗಿ ಧರ್ಮಸಂಬಂಧಿಯಾದುದು. ಶಿವ ಅಥವಾ ಶಿವಭಕ್ತರಿಗೆ ಅನ್ಯಾಯವಾದುದು ಕಂಡುಬಂದಾಗ ಅದಕ್ಕಾಗಿ ತೋರಿದ ಪ್ರತಿಭಟನೆಯನ್ನೇ ನಾವು ನೋಡುವುದು ರಾಜನಿಗೆ ನಮಸ್ಕರಿಸುವುದಿಲ್ಲ. ಶಿವನಿಗೆ

ನಮಸ್ಕರಿಸುತ್ತೇವೆ. ಶಿವಭಕ್ತನಾಗಿರುವ ಹೊಲೆಯ ತನ್ನಂತೆಯೇ ಶಿಭಕ್ತ ಅವನ ಸಮಾನತೆಯನ್ನು ತಾನು ಒಪ್ಪಿಕೊಂಡಿರುವುದನ್ನು ರಾಜ ಪ್ರಶ್ನಿಸಿದುದಾದರೆ ತಾನು ಊರನ್ನೇ ಬಿಡಲು ಸಿದ್ಧ. ಈ ರೀತಿಯ ಪ್ರತಿಭಟನೆಯನ್ನು ಸಾಮಾಜಿಕ ಆಂದೋಲನವೆಂದು ಕರೆಯಲಾಗದಿದ್ದರೂ ವ್ಯಕ್ತಿ ತಾನೂ ನಂಬಿದ ಯಾವುದೋ ನಂಬಿಕೆಗಾಗಿ ಆದರ್ಶಕ್ಕಾಗಿ ಎದೆಸೆಟೆದು ನಿಲ್ಲುವ ಮತ್ತು ತನ್ನ ಸುಖದ ತ್ಯಾಗಕ್ಕೂ ಸಿದ್ಧವಾಗುವ ಛಲಗಾರಿಕೆ ಇಲ್ಲಿ ಕಾಣುತ್ತದೆ. ಹೀಗೆ ಎದೆ ಸೆಟೆದು ನಿಂತವರೆಲ್ಲ ನಮಗೆ ತಿಳಿದಮಟ್ಟಿಗೆ ಬ್ರಾಹ್ಮಣೇತರರು. ಇವರು ವ್ಯಕ್ತಿಯ ಮಟ್ಟದಲ್ಲಿ ಆರಂಭಿಸಿದ ಕಾವ್ಯವನ್ನು ಮುಂದುವರಿಸಿ ಒಂದು ಮಹಾ ಸಾಮಾಜಿಕ ಆಂದೋಲವನ್ನು ಯಶಸ್ವಿಗೊಳಿಸಿದವರು ವಚನಕಾರರು. ತನ್ನ ಸ್ವಾರ್ಥ ಸಾಧನೆಗೆ ಚಕ್ರವರ್ತಿಯನ್ನು ಕೊಂದ ಇನ್ನೊಬ್ಬ ಪಟ್ಟಕ್ಕೆ ಬಂದುದು ಬಸವ ಮೊದಲಾದವರಿಗೆ ಇನ್ನೂ ಹೆಚ್ಚಿನ ನೈತಿಕ ಸ್ಥೈರ್ಯವನ್ನು ತಂದುಕೊಟ್ಟಿತು. ಅನ್ಯಾಯವಾದಾಗ ದೊರೆ ಪಾಪ ಕಾರ್ಯವನ್ನು ಮಾಡಲು ಹೆದರಿರುವಾಗ ನಾವು ನ್ಯಾಯಕ್ಕಾಗಿ ಹೋರಾಡುವವರಾದ್ದರಿಂದ ಎಕೆ ಅಂಜಬೇಕು ಎಂದು ಧೋರಣೆಗಳು ಸಹಜವಾಗಿಯೇ ಮೂಡುತ್ತದೆ. ಬಿಜ್ಜಳ ಅನ್ಯಾಯದಿಂದ ಪಟ್ಟಕ್ಕೆ ಬಂದದ್ದರಿಂದ ದೇಶದಲ್ಲಿ ಚಾಲುಕ್ಯರಿಗೆ ನಿಷ್ಠೆಯಿಂದಿದ್ದ ಅನೇಕರು ಅವರ ವಿರೋಧಿಗಳಾಗಿದ್ದರು. ಇದು ಬಸವ ಮೊದಲಾದವರಿಗೆ ಅನುಕೂಲಕರವಾಗಿದ್ದಿತು.

ಬಸವಣ್ಣ ತನ್ನ ಸಾಮಾಜಿಕ ಆಂದೋಲನದ ವಿಷಯದಲ್ಲಿ ವಹಿಸಿದ ಒಂದು ಎಚ್ಚರ ಗಮನಾರ್ಹವಾದುದು ಅವನು ಸೇವಕ ವೃತ್ತಿಯಲ್ಲಿದ್ದನೆಂದು ಇತರರು ಆಕ್ಷೇಪಿಸಿದಾಗ ತಾನು ತನಗಾಗಿಯಾಗಲಿ ತನ್ನ ಸಂಸಾರ ವರ್ಗಕ್ಕಾಗಲಿ ಹೀಗೆ ರಾಜನನ್ನು ಓಲೈಸುತ್ತಿಲ್ಲವೆಂದು ಸಮಾಜಕ್ಕಾಗಿ ಮಾತ್ರ ಆ ಕೆಲಸವನ್ನು ಒಪ್ಪಿಕೊಂಡಿರುವುದಾಗಿ ತನ್ನ ವೃತ್ತಿಯನ್ನು ಕೈಗೊಂಡಿರುವುದಾಗಿ ಒಂದು ವಚನದಲ್ಲಿ ಹೇಳಿಕೊಂಡಿದ್ದಾನೆ. ಒಂದು ಕಡೆ ರಾಜ ಇನ್ನೊಂದು ಕಡೆ ರಾಜಕೀಯ ಘಟನೆಗಳಿಂದ ಅತೃಪ್ತರಾದ ಪ್ರಚಾರವರ್ಗ, ಬಸವಣ್ಣನಿಗೆ ಬಹಳ ಅನುಕೂಲಕರವಾದ ಪರಿಸ್ಥಿತಿ ಇದು ಸಾಮಾನ್ಯ ಜನತೆಯ ಮಟ್ಟದಲ್ಲಿ ಎಚ್ಚರವನ್ನು ಮೂಡಿಸುವ ಕಾರ್ಯವನ್ನು ಮೌನವಾಗಿ ಸಾಧಿಸುವುದು ಸಾಧ್ಯವಾಯಿತು. ಈ ಎಚ್ಚರಿಸುವ ಕಾರ್ಯ ಮುಂದುವರಿದು ಅದು ರಾಜನ ಅಥವಾ ಇತರ ಮೇಲ್ವರ್ಗದವರ ಗಮನಕ್ಕೆ ಬರುವ ಕಾಲಕ್ಕೆ ಆ ಆಂದೋಲನ ಆರಿಸಲು ಸುಲಭವಾಗದಂತಹ ಕಿಚ್ಚಿನ ಆಕಾರವನ್ನು ತಾಳಿದ್ದಿತು. ತನ್ನ ರಾಜಕೀಯ ಕೊಲೆಯಿಂದ ಹಲವರ ದ್ವೇಷವನ್ನು ಆಗಲೇ ಕಟ್ಟಿಕೊಂಡಿದ್ದ ಬಿಜ್ಜಳ ಬಸವಣ್ಣನ್ನಾಗಲಿ ಅವನ ಅನುಯಾಯಿಗಳನ್ನಾಗಲಿ ದಮನ ಮಾಡಿ ಆ ವರ್ಗ ದ್ವೇಷವನ್ನು ಕಟ್ಟಿಕೊಳ್ಳಲು

ಸಿದ್ದನಿರಲಿಲ್ಲ. ಆದರೆ ಸಾಂಪ್ರದಾಯಿಕ ಸಮಾಜದ ನೇತಾರರು ಬಸವನ ಮೇಲೆ ಆರೋಪವನ್ನು ಹೊರಿಸಿದಾಗ ಅದನ್ನು ಅಲಕ್ಷಿಸಿ ಅವರ ಅಸಮಾಧಾನವನ್ನು ಕಟ್ಟಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಈ ಬಿಜ್ಜಳ ಧರ್ಮಸಂಕಟವನ್ನು ಬಸವನ ಜೀವನದಲ್ಲಿ ಬರುವ ಅನೇಕ ಘಟನೆಗಳು ರುಜುವಾತುಪಡಿಸುತ್ತವೆ. ಒಟ್ಟಿನಲ್ಲಿ ಅವನು ಸಂಪ್ರದಾಯ ನಿಷ್ಠರ ಕಡೆಗೆ ಇದ್ದು ಅವರತ್ತ ಒಲವು ತೋರಿಸುತ್ತಿದ್ದವನಾದರೂ, ಬಸವಣ್ಣನನ್ನು ಸಂಶಯ ದೃಷ್ಟಿಯಿಂದಲೇ ನೋಡುತ್ತಿದ್ದು ಆಗಾಗ್ಗೆ ಅಸಮಧಾನ ತೀವ್ರವಾದಾಗ ಅವನನ್ನು ಮಾತಿನಿಂದ ಇರಿಯುತ್ತಿದ್ದನಾದರೂ ತನ್ನ ಕೈಕೆಳಗಿನ ಒಬ್ಬ ಅಧಿಕಾರಿಯನ್ನು ಏಕೆ ತೆಗೆದು ಹಾಕಲಿಲ್ಲವೆಂಬುದಕ್ಕೆ ಅವನ ಮನಸ್ಸಿನ ಡೋಲಾಯ ಮನವೋ ಅಳುಕೋ ಹಿಂಜರಿಕೆಯೋ ಕಾರಣವೆಂಬುದು ಸ್ಪಷ್ಟವಾಗಿದೆ. ಅಂದಿನ ರಾಜಕೀಯ ಪರಿಸ್ಥಿತಿ ವಚನಕಾರರ ಆಂದೋಲನಕ್ಕೆ ಸಹಾಯಕವಾಗಿಯೇ ಇತ್ತು. ಇದೇ ಆಂದೋಲನ ಆರನೇಯ ವಿಕ್ರಮಾಧಿತ್ಯನಂತಹ ಬಲಿಷ್ಠ ಚಕ್ರವರ್ತಿಯ ಕಾಲದಲ್ಲಿ ಯಶಸ್ವಿಯಾಗುತ್ತಿತ್ತೇ ಎಂಬ ಪ್ರಶ್ನೆಗೆ ಬಹುಶಃ ಇಲ್ಲ ಎಂಬುದೇ ಉತ್ತರವಾಗುತ್ತದೆ.

ಬಸವ ಯುಗವನ್ನು ಸ್ವತಂತ್ರಯುಗವೆಂದೂ ತಾಂತ್ರಿಕಯುಗವೆಂದು ಕರೆಯುವುದುಂಟು ಅಂಧಃಶ್ರದ್ಧೆಯು ಹೋಗಿ ಸ್ವಾತಂತ್ರ್ಯವಾಗಿ ಆಲೋಚಿಸುವುದು ಪ್ರಾರಂಭವಾದುದರಿಂದ ಅದನ್ನು ಸ್ವಾತಂತ್ರ್ಯಯುಗವೆನ್ನುವರು. ಧರ್ಮಾಧರ್ಮ ಎಂಬುದನ್ನು ಅಂಧಶ್ರದ್ಧೆಯಿಂದ ನಿರ್ಧರಿಸಿದೆ. ಅದರ ನಿರ್ಧಾರಕ್ಕೆ ಸ್ವಾತಂತ್ರ್ಯ ಪರ್ಯಾಲೋಚನೆಯ ಅವಕಾಶವು ಉಂಟಾದುದರಿಂದ ಧರ್ಮಕ್ರಾಂತಿಯಾಗಿ ಆ ಕಾಲವು ಕಾಂತಿಯುಗವೆನಿಸಿಕೊಂಡಿತು.

ಬಸವಣ್ಣ ಶಿವನೇ ದೈವ ಎಂಬುದನ್ನು ಒತ್ತಿ ಹೇಳಿ ಆ ಪ್ರಾದೇಶಿಕ ದೈವಗಳ ಪೂಜೆಯನ್ನು ಬಿಡಿಸಿದ್ದರಿಂದ ಸಾಮಾನ್ಯ ಜನತೆಯನ್ನು ಒಂದು ದೈವದ ಭಕ್ತರನ್ನಾಗಿ ಮಾಡಿ ತಾವೆಲ್ಲ ಸಮಾನರು, ಶಿವನ ಮಕ್ಕಳು ಎಂಬ ವಿಶ್ವಾಸವನ್ನು ಅವರಲ್ಲಿ ಮೂಡಿಸಿದ. ಸಾತ್ವಿಕ ಆಚರಣೆಗಳಿಗೆ ಮಹತ್ವ ಬಂದದ್ದರಿಂದ ಬಾಯಿಬೀಗ, ಬೆಂಕಿತುಳಿಯುವುದು, ತಲೆಯ ಮೇಲೆ ಮಲದ ಬುಟ್ಟಿ ಹೊರುವುದು ಇತ್ಯಾದಿ ಅನಾಗರಿಕ ಮತೀಯ ಜಾತೀಯ ಆಚರಣೆಗಳು ತಾನಾಗಿ ಅಳಿಸಿ ಹೋದವು. ಶಿವನನ್ನು ಒಪ್ಪಿಕೊಂಡಿದ್ದರಿಂದ ಆ ಜನಕ್ಕೆ ತಮ್ಮಲ್ಲಿ ಆತ್ಮವಿಶ್ವಾಸ ಮೂಡಿತು. ಶಿವ ಪ್ರಾದೇಶಿಕ ದೈವವಲ್ಲ. ಭಾರತೀಯ ದೈವ ಎಲ್ಲ ವರ್ಗದವರೂ ಪೂಜಿಸುವ ದೈವ.

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡುವೆ ಬಡವನಯ್ಯಾ
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಶಿರವೇ ಹೊನ್ನ ಕಲಶವಯ್ಯಾ
ಕೂಡಲಸಂಗಮದೇವಾ, ಕೇಳಯ್ಯಾ
ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ

ದೇವಸ್ಥಾನವೇನಿದ್ದರೂ 'ಉಳ್ಳವರ'ದು ಶ್ರೀಮಂತರದು, ಆದರೆ ಬಸವಣ್ಣನ ಆಂದೋಲನ ಬಡವರಿಗಾಗಿ ಹೀಗಿರುವಾಗ ಪ್ರತಿಯೊಬ್ಬ ವ್ಯಕ್ತಿಯ ದೇಹವೇ ದೇಗುಲವಾಗಿ ಪರಿವರ್ತನೆಯಾಗಬಲ್ಲಂತಹ ಇಷ್ಟ ಲಿಂಗಧಾರಣೆಯನ್ನು ವಚನಕಾರರು ಒತ್ತಿ ಹೇಳಿದ್ದು ಉಚಿತವಾಗಿಯೂ ಅರ್ಥಪೂರ್ಣವಾಗಿಯೂ ಇದೆ. ವ್ಯಕ್ತಿಗಳು ಸಮಾಜದಲ್ಲಿ ಬೇರೆ ಬೇರೆ ಕಾರ್ಯಭಾಗಗಳನ್ನು ವಹಿಸಿ ಯಾವುದೇ ಅಸಮಾನತೆಯಿಲ್ಲವೂ ಇಲ್ಲದಂತೆ ಆಯಾ ಕರ್ತವ್ಯಗಳನ್ನೆಸುಗುತ್ತ ಒಟ್ಟು ಸಮಾಜದ ಯಂತ್ರ ಸಲೀಸಾಗಿ ನಡೆಯುವುದಕ್ಕೆ 'ಪಂಚಾಚಾರದ' ಕಲ್ಪನೆ ಅದ್ಭುತ ರೀತಿಯಲ್ಲಿ ಸಹಾಯವಾಯಿತು. ಆಂದೋಲನದ ನಾಯಕರು ಮತಾಂತರಗೊಂಡ ವ್ಯಕ್ತಿಗಳಿಗೆ ಬೋಧನೆ ಮಾಡಿ ಅವರನ್ನು ಬರಿಯ ಮತಾಂಧರನ್ನಾಗಿ ಮಾಡಿ ಮೂಲೆಗೆ ಕೂರಿಸಲಿಲ್ಲ. ಅವರಲ್ಲಿ ನೈತಿಕ ಪ್ರಜ್ಞೆಯನ್ನು ಬಿತ್ತಿದ್ದರು.

ಬಸವಣ್ಣನ ಅನೇಕ ವಚನಗಳಲ್ಲಿ ಸಾಹಿತ್ಯವಾಗಿ ನೋಡುವುದು ತೇಲುನೋಟವಾಗಿ ಪರಿಣಮಿಸುವ ಅಪಾಯವಿದೆ. ಅವುಗಳನ್ನು ಆ ಕಾಲದ ಸಾಮಾಜಿಕ ಪರಿಸರದಲ್ಲೇ ಇಟ್ಟು ನೋಡಬೇಕು ವಚನಗಳು ವಚನಕಾರರು ತಮ್ಮ ಪರಿಸರದೊಂದಿಗೆ ಸ್ಪಂದಿಸಿದ ಕ್ರಿಯೆಯ ಫಲಗಳು ಅವು ಮೂಲತಃ ಪ್ರತಿಭಟನಾತ್ಮಕವಾಗಿದೆ. ಅವುಗಳ ಒಟ್ಟು ಉದ್ದೇಶ ನವ ಸಮಾಜವೊಂದರ ನಿರ್ಮಾಣವೇ ಆಗಿದೆ.

## ಅಧ್ಯಾಯ – ೩

# ಹನ್ನೆರಡನೇ ಶತಮಾನದಲ್ಲಿ ಸೃಷ್ಟಿಯಾದ ವಚನ ಸಾಹಿತ್ಯದ ಉಗಮ ಮತ್ತು ಉದ್ದೇಶ

ಹನ್ನೆರಡನೆಯ ಶತಮಾನದ ಶಿವಶರಣರ ವಚನಗಳು ಅತ್ಯಂತ ನವನವೋನ್ವೇಷಶಾಲಿ ಗಳಾಗಿದ್ದು, ವಚನಕಾರರು ಕ್ರಿಯಾಜ್ಞಾನ ಸಮನ್ವಯಗಳಾಗಿದ್ದು ವಚನ ಸಾಹಿತ್ಯ ಭೋರ್ಗರೆವ ನದಿಯಂತೆ ಶಿವಶರಣರ ಹೃದಯಾಂತರಾಳದಿಂದ ಹೊರಹೊಮ್ಮಿತು. ಸಮಾಜದಲ್ಲಿನ ಅನೀತಿ, ಅತ್ಯಾಚಾರಗಳನ್ನು ತೊಡೆದು ಹಾಕಲು ಪ್ರಯತ್ನಿಸಿದರು. ಅವರ ವಚನಗಳಲ್ಲಿ ಸರಳ ಭಾಷೆಯಲ್ಲಿ ರಚಿಸಿ ಅವುಗಳ ಮೂಲಕ ತನ್ನ ಪ್ರಚಾರ ಮಾಡಿ ನೀತಿ ಶಿಕ್ಷಣವನ್ನು ಸಾಮಾಜಿಕ ಶಿಕ್ಷಣವನ್ನು ಪ್ರಚಾರ ಮಾಡಿದ್ದರೂ ಉತ್ತಮ ಸಮಾಜ ನಿರ್ಮಾಣ ಮಾಡುವುದೇ ಅವರ ಉದ್ದೇಶವಾಗಿತ್ತು.

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಅಷ್ಟೇ ಏಕೆ ವಿಶ್ವ ಸಾಹಿತ್ಯ ಶ್ರೇಣಿಯಲ್ಲಿ ವಚನ ಸಾಹಿತ್ಯಕ್ಕೆ ವಿಶಿಷ್ಟ ಸ್ಥಾನವಿದೆ. ವಚನ ಸಾಹಿತ್ಯದಿಂದ ಕನ್ನಡ ಸಾಹಿತ್ಯವು ಶ್ರೀಮಂತವಾಗಿದೆ ಮತ್ತು ಸಮೃದ್ಧವಾಗಿದೆ. ಕನ್ನಡನಾಡಿನ ಮಹತ್ಸಾಧನೆಯ ಇತಿಹಾಸದಲ್ಲಿ ವಚನ ವಾಙ್ಮಯದ ಸ್ಥಾನಮಾನ ಮಹತ್ವಪೂರ್ಣವಾಗಿದೆ. ೧೨ನೇ ಶತಮಾನದ ಪ್ರವರ್ತಕ ಶಕ್ತಿಯಾಗಿ, ಸಾರ್ವಕಾಲಿಕ ಸತ್ಯವನ್ನು ಸತ್ವವನ್ನು ಒಳಗೊಂಡ ಚಲನಶೀಲ ಮೌಲ್ಯವುಳ್ಳದ್ದು ವಚನ ಸಾಹಿತ್ಯ. ವಚನಸಾಹಿತ್ಯ ಮಾನವನ ಬಹಿರಂಗ ಶುದ್ಧಿಯನ್ನು ನೀಡಿ ಆಂತರಿಕ ಪರಿಶುದ್ಧಿಯನ್ನು ದಯಪಾಲಿಸಿದೆ. ಬದುಕಿನ ಮೌಲ್ಯವನ್ನು ಹೆಚ್ಚಿಸಿ ಮಾನವನ ದೇವನನ್ನಾಗಿಸುವ ಮಹೋನ್ನತ ಗುರಿ ಹಾಗೂ ಗುಣವನ್ನು ಹೊಂದಿದೆ.

'ವಚನ' ಎಂಬ ಶಬ್ದ ವಿಶಿಷ್ಟಾರ್ಥ ಹೊಂದಿದೆ. 'ವಚನ' ಶಬ್ದವು ಮೂಲ ಸಂಸ್ಕೃತ 'ವಚ್' ಎಂಬ ಧಾತುವಿನಿಂದ ಆದ ನಾಮಪದವು 'ವಚ್' ಎಂದರೆ ಮಾತನಾಡು, ನುಡಿ ಎಂದರ್ಥ. ವಚನವೆಂದರೆ ನುಡಿ ಮಾತು ಅಥವಾ ಹೇಳಿಕೆ. ಸಾಹಿತ್ಯದಲ್ಲಿ ಚಂಪೂ ಗ್ರಂಥದಲ್ಲಿ ಉಪಯೋಗಿಸಿದ ಸಣ್ಣ ದೊಡ್ಡ ಗದ್ಯ ಭಾಗಗಳಿಗೆ ವಚನ ಎಂದೆನ್ನುವರು. ನಮಗೆ ದೊರೆಯುವ ಅತ್ಯಂತ ಪ್ರಾಚೀನ ವಚನಗಳೆಂದರೆ ಹನ್ನೆರಡನೆಯ ಶತಮಾನದ ಪೂರ್ವಭಾಗದಲ್ಲಿದ್ದು ಜೇಡರ ದಾಸಿಮಯ್ಯನದು.

೧೨ನೆಯ ಶತಮಾನವು ಕನ್ನಡ ಸಾಹಿತ್ಯದ ಸುವರ್ಣಯುಗ. ಕರ್ನಾಟಕದ ಚರಿತ್ರೆಯಲ್ಲಿ ೧೨ನೇ ಶತಮಾನದ ಒಂದು ಉಜ್ವಲ ಯುಗ. ಅಂದು ಅಸಂಖ್ಯಾತ ಶಿವಶರಣರು ಕಲ್ಯಾಣದಲ್ಲಿ ಕೇಂದ್ರೀಕೃತವಾಗಿ ತಮ್ಮ ಪ್ರಖರವಾದ ವೈಚಾರಿಕ ಪ್ರಜ್ಞೆಯಿಂದ ಅದ್ಭುತ ಕ್ರಾಂತಿಯನ್ನು ಎಸಗಿ ಸಮಾಜದ ಗುರಿಯನ್ನೇ ಬದಲಿಸಿದರು. ನಾಡಿನ ನರನಾಡಿಗಳಲ್ಲಿ ನವಚೈತನ್ಯ ತುಂಬಿ ಬದುಕಿಗೊಂದು ಹೊಸ ಅರ್ಥವನ್ನು ತಂದುಕೊಟ್ಟರು. ಜೀವನದ ಎಲ್ಲ ರಂಗಗಳಲ್ಲಿ ವ್ಯಾಪಿಸಿದ ಅಜ್ಞಾನ, ಅಂಧಕಾರ, ಅಸಮಾನತೆಗಳನ್ನು ತೊಡೆದು ಸುಜ್ಞಾನ ಸೂರ್ಯನ ಸುವರ್ಣ ಕಿರಣಗಳನ್ನು ಬೀರಿದರು.

ಪುಣ್ಯಪುರುಷರ ಪರಿಸರದ ಕೂಸುಗಳೆಂದು ಹೇಳಲಾಗುತ್ತದೆ. ಸಮಾಜದ ಅನಿಷ್ಟಗಳ ಮಧ್ಯದಲ್ಲಿ ಆವಿರ್ಭವಿಸಿ ಅವರ ನೋವು ನಿಟ್ಟುಸಿರುಗಳಿಗೆ ಸ್ಪಂದಿಸಿ ಅವರ ಕಣ್ಣೀರು ತೊಡೆದುಹಾಕುವುದರ ಸಲುವಾಗಿ ಅವರ ಕರುಣೆಯ ಹಿರಿಮೆಗೆ ಸಹಜವಾಗಿ ಕಂಕಣಬದ್ಧರಾಗಿರುತ್ತಾರೆ. ಹನ್ನೆರಡನೆಯ ಶತಮಾನದ ಸಮಾಜ ಕಂಡ ಅನಿಷ್ಟಗಳ ಅನಾಹುತ ವಿಷಮತೆಗಳ ಜ್ವಾಲೆಯಿಂದ ಬೆಂದ ಮಾನವ ಸಮೂಹದ ಸರಳುವಿಕೆಯ ಮಧ್ಯದಲ್ಲಿ ಶರಣರು ಅರಳಿದರು. ಸಮಾಜದ ಶುದ್ಧಿಕರಣಕ್ಕೆ ಸಿದ್ಧರಾದರು. ಪರಿಸರದ ಕ್ರೂರತೆಯಿಂದ ಪ್ರೇರಣೆಗೊಂಡು ಮಾನವ ಕುಲೋದ್ಧಾರಕ್ಕೆ ಅಸಂಖ್ಯಾ ಶರಣರ ಸಮೂಹವೇ ೧೨ನೇ ಶತಮಾನದಲ್ಲಿ ಉದಯಿಸಿತು. ಇವರು ಪವಾಡ ಪುರುಷರಲ್ಲಿ ಪುಣ್ಯಪುರುಷರು. ಅಸಂಖ್ಯ ಶರಣರಲ್ಲಿ ಅನೇಕ ಶರಣರು ವಚನಗಳನ್ನು ರಚಿಸಿದರು. ಅವರಲ್ಲಿ ೨೮ ವಚನಕಾರರಿರುವರು. ಅವರಲ್ಲಿ ಪ್ರಮುಖರೆಂದರೆ ಬಸವಣ್ಣ, ಚೆನ್ನಬಸವಣ್ಣ, ಅಲ್ಲಮಪ್ರಭು, ಚೌಡಯ್ಯ, ಮಾರಯ್ಯ, ಚಂದಯ್ಯ, ಅಪ್ಪಣ್ಣ, ಜೇಡರದಾಸಿಮಯ್ಯ, ಆದಯ್ಯ ಇತ್ಯಾದಿ ಸ್ತ್ರೀ ವಚನಕಾರರಲ್ಲಿ ಅಕ್ಕನಾಗಮ್ಮ, ಸಂಚಿಹೊನ್ನಮ್ಮ, ಅಕ್ಕಮಹಾದೇವಿ, ಕರಿದರೆಮ್ಮವ್ವ ಮುಂತಾದವರನ್ನು ಹೆಸರಿಸಬಹುದು. ಶರಣರು ಕೇವಲ ಬೋಧಕರಲ್ಲ, ಉಪದೇಶ ನೀಡುವವರಲ್ಲ, ಸ್ವತಃ ಕರ್ಮಚಾರಿಗಳು ಸ್ವತಃ ಕಾಯಕ ನಿಷ್ಟರು; ಸ್ವತಃ ಆಚರಣೆಗಿಳಿದವರು, ಪ್ರತಿಯೊಬ್ಬ ಶರಣರನ್ನು ಒಂದೊಂದು ಕಾಯಕ ಹೊಂದಿದ್ದರು. ಕಾಯಕದಲ್ಲಿ ನಿರತರಾದಾಗ ಗುರುಲಿಂಗ ಜಂಗಮನನ್ನು ಮರೆತವರು. ಕಾಯಕದಿಂದಲೇ ಕೈಲಾಸವೆಂಬುದನ್ನು ನಂಬಿದವರು. ಕಾಯಕ ಕೈಗೊಂಡವರಿಗೆ ಮಾತ್ರ ಕೈ ಮುಗಿಯುವರು. ಅವರ ಹೆಸರು ಕಾಯಕಗಳು ಅವರ ಹೆಸರಿನಿಂದಲೇ ಬಂದಿದೆ. ಹಡವಿದ ಅಪ್ಪಣ್ಣ, ನುಲಿಯ ಚಂದ್ರಯ್ಯ, ಆಯ್ದಕ್ಕಿ

ಮಾರಯ್ಯ, ಮಡಿವಾಳ ಮಾಚಯ್ಯ ಇತ್ಯಾದಿ ಆಯಾ ಶರಣರ ಹೆಸರಿನೊಂದಿಗೆ ಹೊಂದಿದ ಕಾಯಕಗಳಾಗಿವೆ.

'ವಚನ'ವೆಂದರೆ ಮಂತ್ರ, ಆತ್ಮಸಾಕ್ಷಿಯ ಮಾತು, ಆಧ್ಯಾತ್ಮದ ಸೂತ್ರಗಳೆಂದು ಅರ್ಥೈಸಬೇಕು ಶಿವಶರಣರು ನುಡಿದಂತೆ ನಡೆದರೂ ಹೆಚ್ಚಾಗಿ ನಡೆದು ನುಡಿದ ಮಾತು ಮಂತ್ರವಾಗುತ್ತದೆ. ಅದುವೆ ವಚನವಾಗುತ್ತದೆ. ಅವರ ಮಾತುಗಳು ಮಂತ್ರಗಳಾದವು. ಅಲ್ಲದೇ ಅದು ಜ್ಯೋತಿರ್ಲಿಂಗ ವೆನಿಸಿದವು. ಅಂತೆಯೇ ಪ್ರಭುಗಳು

'ಮಾತೆಂಬುದು ಜ್ಯೋತಿರ್ಲಿಂಗ
ಸ್ವರವೆಂಬುದು ಪರತತ್ವ
ತಾಳೋಷ್ಠ ಸಂಪುಟವೆಂಬುದು
ನಾದಬಿಂದು ಕಳಾತೀತ
ಗುಹೇಶ್ವರನ ಶರಣತು
ನುಡಿಯ ಸೂತಕಿಗಳಲ್ಲ ಕೇಳಾ ಮುರುಳೆ'

ಎಂದು ಮಾತಿನ ಮರ್ಮವನ್ನು ಬಿತ್ತರಿಸಿರುವರು. ಯಾರು ನುಡಿದ ಸೂತಕಿಗಳಾಗುವಿದಲ್ಲವೋ ಅಂಥವರ ಮಾತು ಮಾತ್ರ ಜ್ಯೋತಿರ್ಲಿಂಗ. ಅವರ ಬಾಯಿಂದ ಹೊರಡುವ ಸ್ವರವೇ ಪರತತ್ವ, ತಾಳೋಷ್ಠ ಸಂಪುಟವೆಂದರೆ ಮೌನಿಯಾಗುವುದು. ಮೌನಿಯಾದರೂ ನಾದ ಬಿಂದುಕಲಾತೀತರೆನಿ ಸುತ್ತಾರೆ. 'ವಚನ' ಎನ್ನುವ ಈ ರೂಪವು ಶರಣರು ಕನ್ನಡಕ್ಕೆ ಕೊಟ್ಟ ಕಾಣಿಕೆ. ಈ ವಚನಗಳು ತಮ್ಮ ರೂಪ ಮತ್ತು ಸ್ವರೂಪದಿಂದಲೂ ಕೂಡ ಕನ್ನಡ ಸಾಹಿತ್ಯ ಭಂಡಾರದ ಅಮೂಲ್ಯ ರತ್ನಗಳಾಗಿ ವಿಶ್ವಸಾಹಿತ್ಯದ ದೃಷ್ಟಿಯಿಂದ ಕನ್ನಡದ ಬೆಲೆಯನ್ನು ಹೆಚ್ಚಿಸಿವೆ.

೧೨ನೇ ಶತಮಾನದ ಶರಣರು ಉದಯಿಸಿ ಸಮಾಜದಲ್ಲಿನ ಅನೀತಿ, ಅತ್ಯಾಚಾರಗಳನ್ನು ತೊಡೆದುಹಾಕಲು ಪ್ರಯತ್ನಿಸಿದರು. ಅವರ ವಚನಗಳಲ್ಲಿ ಸರಳ ಭಾಷೆಯಲ್ಲಿ ರಚಿಸಿ ಅವುಗಳ ಮೂಲಕ ತನ್ನ ಪ್ರಚಾರ ಮಾಡಿ ನೀತಿ ಶಿಕ್ಷಣವನ್ನು ಸಾಮಾಜಿಕ ಶಿಕ್ಷಣವನ್ನು ಪ್ರಚಾರ ಮಾಡಿದ್ದರೂ ಉತ್ತಮ ಸಮಾಜ ನಿರ್ಮಾಣ ಮಾಡುವುದೇ ಅವರ ಉದ್ದೇಶವಾಗಿತ್ತು. ಆಂದೋಲನದ ನಾಯಕರ ಮತಾಂತರಗೊಂಡ ವ್ಯಕ್ತಿಗಳಿಗೆ ಬೋಧನೆ ಮಾಡಿ ಅವರನ್ನು ಬರಿಯ ಮತಾಂಧರನ್ನಾಗಿ ಮಾಡಿ ಅವರಲ್ಲಿ ಸಾಮಾಜಿಕ ಪ್ರಜ್ಞೆ, ನೈತಿಕ ಪ್ರಜ್ಞೆಯನ್ನು ಬಿತ್ತಿದ್ದರು.

ವ್ಯಕ್ತಿ ಹೇಗೆ ಸಾರ್ಥಕವಾಗಿ ತಾನೂ ಬದುಕಿ ಸಮಾಜವನ್ನು ಬದುಕಿಸಬೇಕೆಂಬುದನ್ನು ಕಲಿಸಿದರು. ವಚನಗಳು ಬರಿಯ ಸಾಹಿತ್ಯವಾಗಿ ನೋಡದೆ ಆ ಕಾಲದ ಸಾಮಾಜಿಕ ಪರಿಸರದಲ್ಲಿ ಗಮನಿಸಿದಾಗ ಸಾಧಿಸಿದ ಕ್ರಿಯೆಯ ಫಲಗಳು ಅವು ಮೂಲತಃ ಪ್ರತಿಭಟನಾತ್ಮಕವಾಗಿವೆ. ವಚನ ವಾಙ್ಮಯವನ್ನೇ ಪ್ರತಿನಿಧಿಸುತ್ತದೆ. ೧೨ನೇ ಶತಮಾನದಲ್ಲಿಯೇ ಅಕ್ಕಮಹಾದೇವಿಯಲ್ಲಿ ಕಂಡುಬರುವ ಬುದ್ಧಿಭಾವನೆಗಳೆರಡರ ಸಮತೂಕ, ಸ್ವತಂತ್ರ ವಿಚಾರಧಾರೆ, ಸ್ವವಿಮರ್ಶೆ, ಅನ್ಯಾಯದೊಡನೆ, ಹೋರಾಡುವ ಕೆಚ್ಚು, ಸ್ವಾಭಿಮಾನ – ಇವು ಇಂದಿನ ಯಾವುದೇ ಮಹಿಳಾ ಚಳುವಳಿಯನ್ನಾಗಲೀ, ವಿಚಾರಕ್ರಾಂತಿಯನ್ನಾಗಲೀ, ಮೀರಿಸುತ್ತದೆ ಎನ್ನುವುದರಲ್ಲಿ ಅನುಮಾನವಿಲ್ಲ. ತಮ್ಮ ಪ್ರಖರವಾದ ವೈಚಾರಿಕಪ್ರಜ್ಞೆ, ನೈತಿಕಪ್ರಜ್ಞೆ ಸಾಮಾಜಿಕ ಪ್ರಜ್ಞೆಯಿಂದ ಅದ್ಭುತ ಕ್ರಾಂತಿಯನ್ನು ಎಸಗಿ ಸಮಾಜದ ಗುರಿಯನ್ನೇ ಬದಲಿಸಿದರು. ನಾಡಿನ ನರನಾಡಿಗಳಲ್ಲಿ ನವಚೈತನ್ಯ ತುಂಬಿ ಬದುಕಿಗೊಂದು ಹೊಸ ಅರ್ಥವನ್ನು ತಂದುಕೊಟ್ಟರು. ಜೀವನದ ಎಲ್ಲ ರಂಗಗಳಲ್ಲಿ ವ್ಯಾಪಿಸಿದ್ದ ಅಜ್ಞಾನ, ಅಂಧಕಾರ, ಅಸಮಾನತೆಗಳನ್ನು ತೊಡೆದು ಸುಜ್ಞಾನ ಸೂರ್ಯನ ಸುವರ್ಣ ಕಿರಣಗಳನ್ನು ಬೀರಿದರು.

ಮಾನವ, ಒಳ ಮತ್ತು ಹೊರಜಗತ್ತುಗಳಲ್ಲಿ ಏಕಕಾಲಕ್ಕೆ ಬದುಕುವುದರಿಂದ ಎರಡೂ ಜಗತ್ತುಗಳನ್ನು ಸಮಾನವಾಗಿ ನೋಡಬೇಕು. ಹಾಗೇ ನೋಡುವ ಕ್ರಮವನ್ನು ೧೨ನೇ ಶತಮಾನದ ವಚನಕಾರರು ಬದುಕಿತೋರಿಸಿದರು. ಪರ್ಯಾಯ ಸಮಾಜದಲ್ಲಿ ಇರುವಿಕೆಗೆ ಮತ್ತು ಬದುಕಿಗೆ ಸಮಾನ ಮಹತ್ವವಿತ್ತು. ಇರುವಿಕೆಯು ಭೌತಿಕ ಪ್ರಕ್ರಿಯೆಯಾದರೆ ಬದುಕು ಅಧ್ಯಾತ್ಮಿಕ ಪ್ರಕ್ರಿಯೆಯಾಗಿದೆ. ವಚನಕಾರರ ಪರ್ಯಾಯ ಸಮಾಜದಲ್ಲಿ ಭೂಪಾಲ (ಮೋಳಿಗೆ ಮಾರಯ್ಯ)ರಂಥ ಶ್ರೀಮಂತರು ವಸ್ತುಮೋಹದಿಂದ ಹೊರಬರುವರು. ಆಯ್ದಕ್ಕಿ ಲಕ್ಕಮ್ಮರಂಥ ಬಡವರು ವಸ್ತು ಮೋಹಕ್ಕೆ ಒಳಗಾಗದೆ ಇರುವರು. ಎಲ್ಲರೂ ಎಲ್ಲ ಅಹಂಕಾರದಿಂದ ಹೊರಬಂದು ಪ್ರೇಮದ ಅತ್ಯುನ್ನತಮಟ್ಟವನ್ನು ತಲುಪುವರು. ಎಲ್ಲ ಶರಣರ ವಚನಗಳು ಅಂತರಂಗದ ಬೆಳಕಾಗಿವೆ. ಅನುಭವಮಂಟಪದಲ್ಲಿ ಎಲ್ಲರ ಬೆಳಕು ಒಂದಾಗಿ ಹಳೆಯ ಸಮಾಜದ ಒಳಗೆ ಪಯಾಾಯ ಸಮಾಜದ ಉದಯವಾಯಿತು.

ಒಟ್ಟಿನಲ್ಲಿ ಶರಣ ಸಾಹಿತ್ಯ ನೈತಿಕ, ಆಧ್ಯಾತ್ಮಿಕ, ಸಾಮಾಜಿಕ, ಬೌದ್ಧಿಕ, ಮಾನಸಿಕ, ದೈಹಿಕ ಮುಂತಾದ ಕ್ಷೇತ್ರಗಳಲ್ಲಿ ತಮ್ಮದೇ ಆದ ಪ್ರಭಾವವನ್ನು ಬೀರಿತು ಶರಣರು

ವಚನಗಳು ವೇದವಾಕ್ಯಗಳಾದವು. ಮೂಢನಂಬಿಕೆ ಮಾಯವಾಗುತ್ತಿದ್ದವು ಜಾತ್ಯಾತೀತ ರಾಷ್ಟ್ರನಿರ್ಮಾಣ ಮಾಡಬೇಕೆಂಬ ಗುರಿಯನ್ನು ಸಾಧಿಸಲು ಪ್ರಯತ್ನಿಸುವಾಗ ನಮ್ಮ ರಾಷ್ಟ್ರದಲ್ಲಿ ೧೨ನೇ ಶತಮಾನದಲ್ಲಿ ಶರಣರ ಉದ್ದೇಶವು ಅದೇ ಆಗಿತ್ತು ಎಂದು ಹೇಳಬಹುದು.

## ಅಧ್ಯಾಯ – ೪

# ಬಸವಣ್ಣನ ವ್ಯಕ್ತಿತ್ವ ಮತ್ತು ಸಾಹಿತ್ಯಕ ಸಾಧನೆ

'ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಿವರಿಸುತ್ತ ಬರುವಾಗ ಒಂದು ಕಡೆ ತಪೋವನವನ್ನು ಪ್ರವೇಶಿಸಿದಂತೆಯೂ ಸಿದ್ಧಿಸಾಧಕ ಋಷಿಗಳ ಸಂದರ್ಶನ ಪಡೆದು ಅವರ ಉದಾತ್ತ ಜೀವನ ಧರ್ಮಬೋಧೆಗಳಿಂದ ನಮ್ಮ ಅಂತರಂಗ ಪರಿಶುದ್ಧವಾದಂತೆಯೂ, ಆತ್ಮನ ಬಂಧನಗಳು ಕಳಚಿ ಬಿದ್ದು ನಾವು ಮುಕ್ತರಾದಂತೆಯೂ ಒಂದು ದಿವ್ಯವಾದ ಹಾಗೂ ಆನಂದಾನುಭವವು ಉಂಟಾಗುತ್ತದೆ.

**ಬಸವಣ್ಣನ ಬಾಲ್ಯ:** ಬಸವಣ್ಣನ ತಂದೆ ತಾಯಿಗಳು ಬಾಗೇವಾಡಿಯ ಪುರ ಪ್ರಮುಖರು. ಬಸವೇಶ್ವರನು ಮಾದರಸ ಪತ್ನಿ ಮಾದಲಾಂಬಿಕೆಯ ಗರ್ಭಸುಧಾಂಬುದ್ದಿಯಲ್ಲಿ ಹುಟ್ಟಿದನೆಂಬ ವಿಷಯದಲ್ಲಿ ಅವನ ಸಂಗತಿಯನ್ನು ಹೇಳುವ ಗ್ರಂಥಗಳಲ್ಲಿ ಒಮ್ಮತವಿದೆ. ಆತನ ವಿಷಯದಲ್ಲಿ ಯಾವ ಶಾಸನವೂ ದೊರೆಯದಿದ್ದ ಕಾಲದಲ್ಲಿ ಡಾ.ಫ್ಲೀಟ್‌ರವರು ಮಣಿಗವಳ್ಳಿಯ ಶಾಸನದಲ್ಲಿ ಉಕ್ತನಾದ ಚಂದಿಮರಸ ಬಿಂದಿರಾಂಬೆಯರ ಪುತ್ರ ಬಸವರಸನೇ ವೀರಶೈವ ಮತೋದ್ಧಾರಕ ಬಸವೇಶ್ವರನೆಂದು ಅನುಮಾನಿಸಿದರು. ಈ ವಿಷಯಗಳನ್ನು ಹೆಚ್ಚು ಪ್ರಚುರಪಡಿಸಿದವರು 'ಬಸವೇಶ್ವರರ ಕಾಲ' ಎಂಬ ಗ್ರಂಥವನ್ನು ಬರೆದ ಕೈ ಚೆನ್ನಮಲ್ಲಿಕಾರ್ಜುನರು 'ಬಾಗೇವಾಡಿ ಪುರವರಾಧೀಶ್ವರ ಮಾದಿರಾಜ ತನೂಜಂ ಬಸವರಾಜನ ಮಹಿಮೆಯನ್ನು ಅರ್ಜುನವಾಟದ ಶಿಲಾಶಾಸನವು ಹೇಳಿರುವುದರಿಂದಲೂ ಮತ್ತು ಹಿಂದಿನಿಂದಲೂ ಬಂದ ನಂಬುಗೆಯನ್ನು ಅಸ್ಥಿರಗೊಳಿಸಲು ಸಾಕಾದಷ್ಟು ಕಾರಣವಿಲ್ಲವೆಂದು ಇಲ್ಲಿ ಹೇಳಿದರೆ ಸಾಕು.

ಜಗತ್ತನ್ನು ಆವರಿಸಿರುವ ತಮಸ್ಸನ್ನು ಪರಿಹರಿಸಲೋಸುಗ ಉದಯವಾಗುವ ಸುಧಾರಕನು ರತ್ನಾಕರದಲ್ಲಿ ಉದಯಿಸುವಂತೆ ಜಗತ್ತನ್ನು ಆವರಿಸಿರುವ ಅಜ್ಞಾನತಮವನ್ನು ಪರಿಹರಿಸುವ ಬಸವ ಸುಧಾರಕನಾದರೂ ಉದಯಿಸಲು ಸುಗುಣರತ್ನಾಕರವೇ ಆಗಿರಬೇಕಷ್ಟೇ ಆದುದರಿಂದ ಬಸವೇಶ್ವರನ ಜನ್ಮದಾತರಾದ ಮಾದರಸ ಮಾದಲಾಂಬಿಕೆಯರನ್ನು ಷಡಕ್ಷರ ಕವಿಯು ಹೇಗೆ ವರ್ಣಿಸಿರುವುದರಲ್ಲಿ ಅತಿಶಯೋಕ್ತಿ ಇರದು.

**ಬಸವಣ್ಣನಿಗೆ ಇಷ್ಟಲಿಂಗ ಪ್ರಧಾನ:** ಬಸವಣ್ಣನು ಹುಟ್ಟಿದೊಡನೆಯೇ ಕೂಡಲ ಸಂಗಮೇಶ್ವರನು ಬರಲಿಂಗ ರೂಪದಿಂದ ಬೆಂದು ಅವನಿಗೆ ಲಿಂಗಧಾರಣ ಮಾಡಿ 'ಬಸವ' ಎಂದು ಹೆಸರಿಟ್ಟರೆಂದು ಬಸವ ಪುರಾಣದಲ್ಲಿ ಹೇಳಿದೆ.

ಜೈನ, ಬೌದ್ಧ ಧರ್ಮಗಳನ್ನು ಹಿಮ್ಮೆಟ್ಟಿಸಿ ಹಿಂದೂಧರ್ಮವನ್ನು ಉದ್ಧರಿಸುವ ಕಾರ್ಯದಲ್ಲಿ ಶಂಕರಾಚಾರ್ಯರು ಜಯಶೀಲರಾದ ಮೇಲೆ ಹಿಂದುಗಳು ವರ್ಣಾಶ್ರಮ ಧರ್ಮದಲ್ಲಿ ಅರಿಶ್ರದ್ಧೆಯುಳ್ಳವರಾಗಿದ್ದರು. ಉಪನಯನವಿಲ್ಲವರಾದುದರಿಂದ ಶೂದ್ರರು ವೇದೋಪನಿಷತ್ತುಗಳನ್ನು ಬಲ್ಲ ದ್ವಿಜರು ಶೂದ್ರರಿಗೆ ಅವುಗಳನ್ನು ಹೇಳಿಕೊಡುತ್ತಿರಲಿಲ್ಲ. ಬಸವಪೂರ್ವಲಿಂಗಿ ಬ್ರಾಹ್ಮಣರೂ ಸ್ವಲ್ಪಮಟ್ಟಿಗೆ ಆಗಲೇ ಸುಧಾರಿತರಾಗಿದ್ದರೂ ಸಹ ಈ ವಿಷಯದಲ್ಲಿ ಕಟ್ಟುನಿಟ್ಟಾಗಿದ್ದರು.

ಶೂದ್ರನು ವೇದವನ್ನು ಕೇಳಿದರೆ ಕಿವಿಗೆ ಕಾದಸೀಸ ಮತ್ತು ಅರಗುಗಳನ್ನು ಹಾಕಬೇಕೆಂದೂ ಇದನ್ನು ಉಚ್ಚರಿಸಿದರೆ ನಾಲಗೆಯನ್ನು ಕತ್ತರಿಸಬೇಕೆಂದೂ ಜ್ಞಾಪಕದಲ್ಲಿಟ್ಟುಕೊಂಡರೆ ಕೊಂದುಹಾಕಬೇಕೆಂದೂ ವಿಧಿಯಿದೆ. ಬ್ರಾಹ್ಮಣರಾದರೂ ಉಪನಯನವಿಲ್ಲದವರಿಗೆ ವೇದೋಪನಿಷತ್ತುಗಳನ್ನು ತಿಳಿಯಲು ಆಗಿನ ಕಾಲದಲ್ಲಿ ಸಾಧ್ಯವಾಗುತ್ತಿರಲಿಲ್ಲ. ಬಸವೇಶ್ವರನು ವೇದೋಪನಿಷತ್ತುಗಳಲ್ಲಿ ಪ್ರವೀಣನಾಗಿದ್ದುದ-ರಿಂದಲೇ ಅವನು ಶ್ರೀಧರನೆಂಬ ಮೀಮಾಂಸಕನೊಬ್ಬನನ್ನು ಸೋಲಿಸಲು ಸಾಧ್ಯವಾಯಿತು.

ಬಸವಣ್ಣನ ಅನೇಕ ವಚನಗಳಲ್ಲಿ ಅವನಿಗೆ ವೇದೋಪನಿಷತ್ತುಗಳಲ್ಲಿದ್ದ ಅಪಾರ ಜ್ಞಾನವು ವ್ಯಕ್ತವಾಗುತ್ತದೆ. ಉಪನಯನವಿಲ್ಲದೆ ಅಂದಿನ ಕಾಲದಲ್ಲಿ ವೇದೋಪನಿಷತ್ತುಗಳ ಜ್ಞಾನ ವಾಗುತ್ತಿರಲಿಲ್ಲವಾಗಿ ಬಸವಣ್ಣನಿಗೆ ಸಕಾಲದಲ್ಲಿ ಉಪನಯನವಾಗಿತ್ತೆಂಬುದೇ ಸಿದ್ಧಾಂತ.

**ವೈವಾಹಿಕ ಬಾಂಧವ್ಯ ಬಂಧನ:** ಬಸವಣ್ಣನು ಎಂಟನೆಯ ವರ್ಷದಲ್ಲಿಯೇ ಉಪನಯನವನ್ನು ತಿರಸ್ಕರಿಸಿ, ಕಪ್ಪಡಿ ಸಂಗಮಕ್ಕೆ ಹೊರಡುವ ಮೊದಲು ಬಾಲದೇವ ಮಂತ್ರಿಯ ಅವನ ಮಗಳನ್ನು ಬಸವೇಶ್ವರನಿಗೆ ಕೊಟ್ಟು ಮದುವೆ ಮಾಡಿದನೆಂದು ಬಸವಪುರಾಣದಲ್ಲಿ ಹೇಳಿದೆ. ಬಸವಣ್ಣನು ಎಂಟನೆಯ ವಯಸ್ಸಿನಲ್ಲಿಯೇ ಲಗ್ನವಾದನೆನ್ನುವುದಕ್ಕಿಂತ ಸಿಂಗಿರಾಜಾದಿಗಳು ಹೇಳುವಂತೆ ನಾಲ್ಕಾರು ವರ್ಷಗಳನ್ನು ಗುರುಕುಲವಾಸದಲ್ಲಿ ಕಳೆದ ಮೇಲೆ ಪ್ರಾಯವು ಪ್ರಾಪ್ತವಾಗಿ ಮದುವೆಯಾದನೆಂಬುದೇ ಹೆಚ್ಚು ಸಂಭವನೀಯವಾದುದು. ತಾನು ಯೋಚಿಸಿದ್ದ ಸಮಾಜಸುಧಾರಣೆಗೆ

ಮಂತ್ರಿಯಾದ ಬಲದೇವ ಸಂಬಂಧದಿಂದ ಅನುಕೂಲವಾಗಬಹುದು ಎಂದು ಬಸವೇಶ್ವರನು ನಂಬಿ ಮದುವೆಯಾಗಲು ಒಪ್ಪಿರಬೇಕು.

ಬಿಜ್ಜಳನು ತನ್ನ ಆಪ್ತನೂ ತನಗೆ ಕೊನೆಯವರೆಗೂ ಸಹಾಯಕನಾಗಿದ್ದ ಕಸಪಯ್ಯನಾಯಕನ ಮೈದನ ಚರ್ಮರಸನಿಗೆ ತನ್ನ ಮಗಳನ್ನು ಕೊಟ್ಟು ಲಗ್ನ ಮಾಡಿದುದಾದರೂ ಬಲಿಷ್ಠರನ್ನು ತನ್ನ ಆಪ್ತಬಂಧುಗಳನ್ನಾಗಿ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದಲೇ ಇರಬೆಕು. ಬಸವಣ್ಣನ ತಂದೆಯಾದರೂ ಬಾಗೇವಾಡಿಯ ಪುರವರಾಧೀಶ್ವರ. ಆತನ ಮಗಳೊಬ್ಬಳನ್ನು ಬಿಜ್ಜಳನು ಮದುವೆಯಾಗಿದ್ದಂತೆ ಬಿಜ್ಜಳರಾಯ ಚರಿತ್ರೆಯಲ್ಲಿ ಹೇಳಿರುವುದರಲ್ಲಿ ಅಸಂಭವವಾದುದೇನೂ ಇಲ್ಲ. ಬಿಜ್ಜಳನು ತನ್ನ ತಂಗಿ ನೀಲಾಂಬಿಕೆಯನ್ನು ಬಸವೇಶ್ವರನಿಗೆ ಕೊಟ್ಟು ಮದುವೆ ಮಾಡಿದನೆಂಬುದು ವಿಶ್ವಸಾರ್ಹ. ಒಂದು ವೇಳೆ ಸಿಂಗಿರಾಜನು ಹೇಳುವಂತೆ ನೀಲಾಂಬಿಕೆಯು ಬಿಜ್ಜಳ ಸಾಕುತಂಗಿಯೇ ಆದರೂ ಬಿಜ್ಜಳನು ಆಕೆಯನ್ನು ಬಸವಣ್ಣನಿಗೆ ಕೊಟ್ಟು ಲಗ್ನ ಮಾಡಿದುದಕ್ಕೆ ಮೇಲೆ ಹೇಳಿದ ರಾಜಕೀಯ ಕಾರಣವೇ ಇರಬೇಕು. ಹರಿಹರನು ಹೇಳುವ ಮಾಯದೇವಿ ಎಂಬ ಹೆಸರು ನೀಲಾಂಬಿಕೆಯ ಹುಟ್ಟು ಹೆಸರಾಗಿರಬಹುದು. ಅದನ್ನು ಲಗ್ನಕಾಲದಲ್ಲಿ ನೀಲಾಂಬಿಕೆಯನ್ನು ಬದಲಾಯಿಸಿ-ಕೊಂಡಿರಬೇಕು.

ಬಸವಣ್ಣನ ದೃಷ್ಟಿಯಲ್ಲಿ "ಹಾರುವ ಮೊದಲಾಗಿ ಅಂತ್ಯಜ ಕಡೆಯಾಗಿ ಶಿವಭಕ್ತರಲ್ಲರನ್ನು ಒಂದೇ ಎಂಬೆ" ಎನ್ನುವರು ಭಕ್ತ ಹಾಗೆನ್ನದೆ ಶಿವಭಕ್ತರಲ್ಲಿ ಜಾತಿಬೇಧವನ್ನು ಎಣಿಸುವವನುಭವಿ ಬಿಜ್ಜಳನಾದರೂ ಬಸವೇಶ್ವರನ ಸುಧಾರಣೆಗಳಿಗೆ ಮೊದಮೊದಲು ವಿರುದ್ಧವಾಗಿದ್ದಂತೆ ಕಾಣುವುದಿಲ್ಲ. ಆದರೆ ಇದು ಹಾರುವ ಹೊಲೆಯರ ನಡುವೆ ವಿವಾಹ ಸಂಬಂಧವಾಗುವಷ್ಟು ದೂರ ಹೋಗಿ, ಈ ಸಿದ್ಧಾಂತವು ಕಾರ್ಯರಂಗಕ್ಕಿಳಿಸಿದಾಗ ಮತ್ತು ಸನಾತನ ಧರ್ಮದವರು ಇದರ ವಿರುದ್ಧ ಸಿಡಿದೆದ್ದಾಗ ಬಿಜ್ಜಳನು ಅವರ ಪಕ್ಷವನ್ನು ವಹಿಸಿ ಬಸವಣ್ಣನಿಗೆ 'ಪರವಾದಿ'ಯಾಗದಂತೆ ಕಾಣುತ್ತದೆ. ಇದಕ್ಕೆ ರಾಜಕೀಯ ಕಾರಣದ ಹಿನ್ನೆಲೆಯೂ ಉಂಟು.

**ಬಸವಣ್ಣನ ಸಾಧನೆ:** ಬಸವ ಯುಗವನ್ನು ಸ್ವಾತಂತ್ರ್ಯಯುಗವೆಂದೂ ಕ್ರಾಂತಿಯುಗವೆಂದೂ ಕರೆಯುವುದುಂಟು ಅಂಧಶ್ರದ್ಧೆಯು ಹೋಗಿ ಸ್ವತಂತ್ರವಾಗಿ ಆಲೋಚಿಸುವುದು ಪ್ರಾರಂಭವಾದುದರಿಂದ ಅದನ್ನು ಸ್ವಾತಂತ್ರ್ಯ ಯುಗವೆನ್ನುವರು. ಧರ್ಮಾಧರ್ಮವೆಂಬುದನ್ನು ಅಂಧಶ್ರದ್ಧೆಯಿಂದ ನಿರ್ಧರಿಸದೆ ಅದರ ನಿರ್ಧಾರಕ್ಕೆ

ಸ್ವತಂತ್ರ ಪರ್ಯಾಲೋಚನೆಯ ಅವಕಾಶವು ಉಂಟಾದುದರಿಂದ ದರ್ಮಕ್ರಾಂತಿಯಾಗಿ ಆ ಕಾಲವು ಕ್ರಾಂತಿಯುಗವೆನಿಸಿಕೊಂಡಿತು.

ಬಸವಣ್ಣನು ಸಂಗಮದಿಂದ ಬಂದುದೇ ಜನರನ್ನು ತಿದ್ದುವ ಸಲುವಾಗಿ ಹೀಗೆ ಮಾಡಲು ಪ್ರಾರಂಭಿಸಲು ಕೆಲವು ಕಾಲ ಹಿಡಿದಿರಬೇಕು. ಜಾಣರಿಗಾದರೂ ಬಸವೇಶ್ವರನ ವಾದವನ್ನು ಕೇಳುವಷ್ಟು ಪ್ರಭಾವವುಂಟಾಗಲು ಸ್ವಲ್ಪ ಕಾಲವಾಗಿರಬೇಕು. ಸಾಮಾನ್ಯ ಜನರನ್ನು ಒಲಿಸುವ ಪವಾಡಗಳನ್ನು ಆಗಾಗ ನಡೆದಿರಬಹುದಾದುರಿಂದ ಬಸವೇಶ್ವರನ ವಾಣಿ ದೇವವಾಣಿ ಎಂದು ನಂಬುವ ಕಾಲ ಬಂದಿತು.

**'ದೇವನೊಬ್ಬ ನಾಮಹಲವು'** ಯಜ್ಞಯಾಗಾದಿಗಳು ಹಿಂಸಾತ್ಮಕವಾದವು. 'ದಯವಿಲ್ಲದ ಧರ್ಮವಾವುದಯ್ಯ' ಎಂದು ಬಸವಣ್ಣನು ಸಾರಿ ಬ್ರಾಹ್ಮಣರು ಮಾತ್ರ ವೇದಮಂತ್ರದಿಂದ ಪೂಜಿಸಬಹುದು ಎಂಬ ವಿಧಿಯನ್ನು ತಪ್ಪಿಸಿ ಜಾತಿ ತಾರತಮ್ಯವನ್ನು ತೊಡೆದು ಹಾಕಿದನು. ಕ್ರಿಯಾಸಾರದಲ್ಲಿ ಹೇಳಿದಂತೆ ಒಂದೊಂದು ಜಾತಿಗೆ ಒಂದೊಂದು ತರದ ಲಿಂಗವೂ, ವಿಧವೆ-ಸಧವೆಯರುಗಳಿಗೆ ಬೇರೆ ಬೇರೆ ತರದ ಲಿಂಗಗಳೂ ಇರಬೇಕೆಂಬ ಪದ್ಧತಿಯನ್ನು ತಪ್ಪಿಸಿ ಎಲ್ಲರೂ ಒಂದೇ ತರಹದ ಲಿಂಗವನ್ನು ಒಂದೇ ರೀತಿಯಲ್ಲಿ ಪೂಜಿಸುವ ಪದ್ಧತಿಯನ್ನು ಬಸವೇಶ್ವರನು ರೂಢಿಗೆ ತಂದನು. ನಿವೃತ್ತರಿಗೆ ಮಾತ್ರ ಮೋಕ್ಷವುಂಟೆಂಬ ಭಾವನೆಯಿದ್ದಿತು. ಆದುದರಿಂದ ಅವರು ಮಾತ್ರ ಕರದಲ್ಲಿ ಇಷ್ಟಲಿಂಗವನ್ನು ಪೂಜಿಸಿ ತಲೆಯಲ್ಲಿ ಧರಿಸಬಹುದಾಗಿದ್ದಿತು. ಸಂಸಾರಿಗಳೂ ಮೋಕ್ಷ ಪಡೆದಿರಲು ಕಾರಣವಿಲ್ಲವಾಗಿ ಎಲ್ಲರೂ ತಮ್ಮ ತಮ್ಮ ಇಷ್ಟಲಿಂಗಗಳನ್ನು ಕರದಲ್ಲಿ ಪೂಜಿಸಿ ಸದಾ ಧರಿಸಬಹುದು ಎಂಬುದು ನಿರ್ಧಾರವಾಯಿತು. ಸಂಸ್ಕೃತವೇ ಮಡಿಯ ಭಾಷೆ, ಕನ್ನಡ, ಮೈಲಿಗೆ ಎಂಬ ಅಭಿಪ್ರಾಯ ಹೋಯಿತು. ಒಟ್ಟಿನಲ್ಲಿ ಸ್ತ್ರೀ ಪುರುಷ, ಬ್ರಾಹ್ಮಣ, ಶೂದ್ರ, ಅಂತ್ಯಜ ಮೊದಲಾದ ತಾರತಮ್ಯ ಭಾವನೆಗಳು ಹೋಗಿ ಭವದಲ್ಲಿ ತೊಳಲುವನು ಭವಿ ಗುರು ದೈವ ಭಕ್ತಿಯುಳ್ಳವನು ಭಕ್ತ ಎಂಬುದರಿಂದ ಕೀಳು ಮೇಲೆಂಬುದು ನಿರ್ಧಾರವಾಗುವಂತಾಯಿತು.

**ಕಾಯಕ ಜೀವಿಗಳ ಸಮಾಜ:** ನಮ್ಮ ಸಮಾಜ ಸಹಸ್ರಾರು ವರ್ಷಗಳಿಂದ ರೈತ ಕೇಂದ್ರಿತ ಸಮಾಜವಾಗಿತ್ತು. ಭೂಪಾಲರು ಮತ್ತು ಜಮೀನುದಾರರು ವಿಧಿಸಿದ ಸಾಮಾಜಿಕ ನಿಯಮಗಳನ್ನು ಬಡರೈತರು ಪಾಲಿಸಬೇಕಿತ್ತು. ಯಥಾಸ್ಥಿತಿಯನ್ನು ಮುಂದುವರಿಸಿಕೊಂಡು ಹೋಗುವ ರೀತಿಯಲ್ಲಿ ಆಯಪದ್ಧತಿಯ ಸ್ವಯಂ ಪರಿಪೂರ್ಣ

ಸಮಾಜ ವ್ಯವಸ್ಥೆ ಗಟ್ಟಿಗೊಂಡಿತ್ತು. ಕಾಯಕ ಜೀವಿಗಳು ಜಾತಿ ಉಪಜಾತಿ ಜೀವಿಗಳಾಗಿ ಪರಿವರ್ತನೆಗೊಂಡರು. ಹಿಂದಿನಿಂದ ಬಂದ ರೈತಕೇಂದ್ರಿತ ಸಮಾಜದಲ್ಲೇ ಒಟ್ಟಾರೆ ಕಾಯಕಜೀವಿಗಳ ಕೇಂದ್ರಿತ ಪರ್ಯಾಯ ಸಮಾಜವನ್ನು ಮೊದಲಿಗೆ ರಚಿಸಿದ ಕೀರ್ತಿ ಬಸವಣ್ಣನವರಿಗೆ ಸಲ್ಲುತ್ತದೆ. ಈ ರೀತಿಯ ಬದಲಾವಣೆಯಿಂದ ಸಮಾಜದಲ್ಲಿ ಚಿಂತನ–ಮಂಥನ ಪ್ರಾರಂಭವಾಯಿತು. ಪ್ರಶ್ನಿಸುವ ಮತ್ತು ಸಮಾನತೆಯ ಪ್ರಜ್ಞೆ ಮೂಡಿತು. ಹೀಗೆ ಅಸಮಾನತೆಯ ಸಮಾಜದಲ್ಲಿ ಸಮಾನತೆಯ ಪ್ರಜ್ಞೆ ಮೂಡಿಸುವ ಪರ್ಯಾಯ ಸಮಾಜ ರಚನೆಯ ರಹಸ್ಯವನ್ನು ಬಸವಣ್ಣನವರು ತಿಳಿಸಿಕೊಟ್ಟರು. ಬಸವಣ್ಣನವರ ಕಾಯಕಕ್ಕೆ ದಾಸೋಹದ ಚೌಕಟ್ಟಿದೆ. ಈ ದಾಸೋಹದ ಕಟ್ಟಳೆ ಇಲ್ಲದಿದ್ದರೆ ಸತ್ಕಿರ್ತಿಯಿಂದ ಗಳಿಸಿದ ಹಣ ಸಂಗ್ರಹವಾದರೂ ಆಹಾ ಸೃಷ್ಟಿಯಾಗುವುದು. ಸಮಾಜದಲ್ಲಿ ಬಸವಣ್ಣನವರ ಪರ್ಯಾಯ ಸಮಾಜದಲ್ಲಿ ದಾನಕ್ಕೆ ಸ್ಥಾನವಿಲ್ಲ. ಕೊಡುವವನಲ್ಲಿ ವಿನಮ್ರಭಾವವನ್ನು ಪಡೆದುಕೊಳ್ಳುವಲ್ಲಿ ಸಮತಾ ಭಾವವನ್ನೂ ಸೃಷ್ಟಿಸುತ್ತದೆ.

**ಹೊಸಪ್ರಜ್ಞೆ**

ಬಸವಣ್ಣನವರು ಬಡವರಿಗೆ ಹೊಸ ಕಾಯಕ ಕೊಡಲಿಲ್ಲ. ಹೊಸ ಪ್ರಜ್ಞೆ ಕೊಟ್ಟರು. ಬೇರೆಯವರಿಗೆ ಸಮಸ್ಯೆಯುಂಟುಮಾಡದ ಯಾವುದೇ ಕಾಯಕ ಕೀಳಲ್ಲ ಎಂದರು. ಮಾನವ, ಒಳ ಮತ್ತು ಹೊರಜಗತ್ತುಗಳಲ್ಲಿ ಏಕಕಾಲಕ್ಕೆ ಬದುಕುವುದರಿಂದ ಎರಡೂ ಜಗತ್ತುಗಳನ್ನು ಸಮಾನವಾಗಿ ನೋಡಬೇಕು. ಹಾಗೆ ನೋಡುವ ಕ್ರಮವನ್ನು ಬಸವಣ್ಣನವರು ಬದುಕಿ ತೋರಿಸಿದರು. ಬಸವಣ್ಣನವರ ಪರ್ಯಾಯ ಸಮಾಜದಲ್ಲಿ ಇರುವಿಕೆಗೆ ಮತ್ತು ಬದುಕಿಗೆ ಸಮಾನ ಮಹತ್ವವಿತ್ತು. ಇರುವಿಕೆಯು ಭೌತಿಕ ಪ್ರಕ್ರಿಯೆಯಾದರೆ ಬದುಕು ಆಧ್ಯಾತ್ಮಿಕ ಪ್ರಕ್ರಿಯೆಯಾಗಿದೆ. ಹೀಗೆ ಬಸವಣ್ಣನವರ ತತ್ತ್ವವು ಈ ಬದುಕನ್ನು ಗೌರವಿಸುವ ತತ್ವವಾಗಿದೆ.

ಬಸವಣ್ಣನವರು ಸಮಾಜದಲ್ಲಿ ಭವ ಮತ್ತು ಭಕ್ತ ವರ್ಗಗಳನ್ನು ಗುರುತಿಸಿದರು. ಈ ಜಗತ್ತು ಭೋಗವಸ್ತು ಎಂದು ಭಾವಿಸುವವರು ಭವಿಗಳು. ಯಾವುದೇ ಜೀವಿಗೆ ತೊಂದರೆಯಾಗದಂತೆ ಬದುಕುತ್ತ ಕಾಯಕದ ಮೂಲಕ ಈ ಜಗತ್ತಿನ ವಸ್ತುಗಳನ್ನು ಹಿತಮಿತವಾಗಿ ಬಳಸಿಕೊಳ್ಳುತ್ತ ಅನಂತವಾದ ಆಧ್ಯಾತ್ಮಿಕವಾದ ಜಗತ್ತಿನ ಕಡೆಗೆ ಸಾಗುವವರು ಭಕ್ತರು.

ಬಸವಣ್ಣನವರ ಪರ್ಯಾಯ ಸಮಾಜದಲ್ಲಿ ಐಹಿಕ ಬದುಕಿಗೆ ಆತ್ಮಜ್ಞಾನದ ಧಾರೆಎರೆಯುತ್ತಾನೆ. ಮಾನಸಿಕವಾಗಿ ಇಡೀ ಸಮೂಹವೇ ತಾನಾಗುತ್ತಾನೆ. ಜಾತಿ ಮನೆಯಿಂದ ಮಹಾಮನೆಗೆ ಸಾಗುತ್ತಾನೆ. ಬಹುದೇವತೆಗಳನ್ನು ತೊರೆದು ಏಕದೇವೋಪಾಸಕನಾಗುತ್ತಾನೆ. ರಾಜಪ್ರಭುತ್ವದ ಉಸಿರುಗಟ್ಟುವ ವಾತಾವರಣದಿಂದ ಹೊರಬಂದು ಪ್ರಜಾಪ್ರಭುತ್ವದ ಬಯಲಿನ ಕಡೆಗೆ ಸಾಗುತ್ತಾನೆ. ಒಳಗೆ ಸ್ಥಿತಪ್ರಜ್ಞನಾಗಿಯೂ ಹೊರಗೆ ಸ್ಥಿತಿಪ್ರಜ್ಞನಾಗಿ ಇರುತ್ತಾನೆ. ನಂಬಿಕೆ ಪ್ರಧಾನ ಸಮಾಜದಿಂದ ಪ್ರಜ್ಞಾಪ್ರಧಾನ ಸಮಾಜಕ್ಕೆ ಬಂದ ಕಾರಣ ಮಾತಿಲ್ಲದ ಸಮುದಾಯದ ಮಾತಾಗುತ್ತಾನೆ.

**ನೈತಿಕ ಪ್ರಜ್ಞಾ ಪ್ರಧಾನ ಸಮಾಜ**

ಅಹಂಕಾರಭಾವ ಅಳಿಸಿ ಸಮರ್ಪಣಾ ಭಾವ ಬೆಳೆಸುವುದು. ವೈಯಕ್ತಿಕವಾದುದನ್ನು ಸಾರ್ವತ್ರಿಕಗೊಳಿಸುವುದು, ಸಾರ್ವತ್ರಿಕವಾದುದನ್ನು ವೈಯಕ್ತಿಕಗೊಳಿಸುವುದು. ಅವುಗಳಲ್ಲಿ ಅಭೇದ್ಯ ಕಲ್ಪಿಸುವುದು. ಕನಿಷ್ಠ ಅವಶ್ಯಕತೆಗಳ ಜೊತೆ ಬದುಕುವುದು. ಸರಳ ಬದುಕಿಗೆ ವಿರುದ್ಧವಾದ ವಸ್ತುಗಳನ್ನು ತ್ಯಜಿಸುವುದು. ದೇಹ ಮತ್ತು ಮನಸ್ಸಿಗೆ ಒಳ್ಳೆಯದಲ್ಲದ ಹವ್ಯಾಸಗಳಿಂದ ಹೊರಬರುವುದು, ಬಸವಣ್ಣನವರ ವಚನಗಳು ಪಯಾಯ ಸಮಾಜ ನಿರ್ಮಾಣಕ್ಕೆ ಅವಶ್ಯಕವಾಗಿದೆ. ಐಹಿಕ ಬದುಕಿಗೆ ಆತ್ಮಜ್ಞಾನದ ಧಾರೆ ಎರೆಯುತ್ತಾನೆ. ಇಡೀ ಸಮೂಹವೇ ತಾನಾಗುತ್ತಾನೆ. ತಾನೇ ಸಕಲ ಜೀವಿಗಳಾಗಿ ನೋಡುವ ಜೀವಾತ್ಮಮುಖಿ, ತನ್ನನ್ನು ತಾನು ಸಮೂಹವಾಗಿ ನೋಡುವ ಸಂಗಾತ್ಮಮುಖಿ ಮತ್ತು ತನ್ನನ್ನು ತಾನು ಅನಂತವಾಗಿ ನೋಡುವ ಪರಮಾತ್ಮಮುಖಿ ಹೇಗಾಗಬೇಕು. ಸಕಲ ಜೀವಾತ್ಮರಿಗೆ ಲೇಸನೆ ಬಯಸುತ್ತ ಹೇಗೆ ವಿಶ್ವಮಾನವರಾಗಿ ರೂಪುಗೊಳ್ಳಬೇಕು ಎಂಬುದನ್ನು ಬಸವಣ್ಣನವರು ನಮಗೆ ಕಲಿಸಿಕೊಟ್ಟರು. ಮಾನಸಿಕ ವ್ಯಕ್ತಿತ್ವ ಆತ್ಮಾಮುಖಿಯಾಗಿರುತ್ತದೆ. ಭೌತಿಕ ವ್ಯಕ್ತಿತ್ವ ಜೀವಾತ್ಮಮುಖಿಯಾಗಿರುತ್ತದೆ. ಸಾಮಾಜಿಕ ವ್ಯಕ್ತಿತ್ವ ಸಂಗಾತ್ಮಮುಖಿಯಾಗಿರುತ್ತದೆ. ವಿಶ್ವ ವ್ಯಕ್ತಿತ್ವದ ಪರಮಾತ್ಮಮುಖಿಯಾಗಿರುತ್ತದೆ. ಇದೇ ಬಸವಣ್ಣನವರ ಅದ್ವಿತೀಯ ಬದುಕುವ ಕಲೆ.

ಹನ್ನೆರಡನೇ ಶತಮಾನದ ಕ್ರಾಂತಿಯ ನೇತಾರನೆನಿಸಿ ಸರ್ವಸಮಾನತೆಯನ್ನು ಸಾಧಿಸಲು ಹೆಣಗಿದ ಬಸವಣ್ಣನ ಯುಗ ಪುರುಷರೇ ಸರಿ. ತಮ್ಮ ಕಾಲದಲ್ಲಿದ್ದ ಮೂಡನಂಬಿಕೆಗಳನ್ನು ಮೂಲೋತ್ಪಾಟನ ಮಾಡಿ ಮರ್ತ್ಯಕ್ಕೆ ಮೆರವ ತರುವಲ್ಲಿ ಶ್ರಮಿಸಿ

ಮಹಾನುಭಾವ ಬಸವಣ್ಣನವರ ಪಾತ್ರ ಸ್ಮರಣೀಯ. ತಮ್ಮ ಸುತ್ತಮುತ್ತ ಸಮಾಜದಲ್ಲಿದ್ದ ಬಹು ದೇವೋಪಾಸನೇ ಜಾತಿ-ಮತ ಬೇಧ, ಸ್ತ್ರೀ-ಪುರುಷ ಬೇಧ ಮೂಢನಂಬಿಕೆಗಳು, ಅಂದ ಆಚರಣೆಗಳನ್ನು ಖಂಡಿಸಿ ಜನರನ್ನು ಸರಿಯಾದ ಮಾರ್ಗದಲ್ಲಿ ನಡೆಸಿಕೊಂಡು ಹೋಗಲು ಶ್ರಮಿಸಿದರು. ಮೇಲುಕೀಳುಗಳೆಂಬ ಭೇದವನ್ನು ಹೋಗಲಾಡಿಸಿ "ಮಾನವ ಜಾತಿ ತಾನೊಂದೆವಲಂ" ಎಂಬ ವಾಣಿಯನ್ನು ಕೃತಿಗಿಳಿಸಲು ಶ್ರಮಿಸಿದ ಮಹಾವ್ಯಕ್ತಿ ಬಸವಣ್ಣ.

## ಅಧ್ಯಾಯ – ೫

# ಬಸವಣ್ಣನ ವಚನಗಳಲ್ಲಿ ನೈತಿಕ ಪ್ರಜ್ಞೆ

ಕಲ್ಯಾಣದ ಶಿವಶರಣರದು ಕನ್ನಡ ನೆಲದ ಮೇಲೆ ನಡೆದ ಪ್ರಥಮ ಸಮಾಜೋಧಾರ್ಮಿಕ ಆಂದೋಲನವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಜರುಗಿದ ಈ ಆಂದೋಲನದ ನಾಯಕ ವ್ಯಕ್ತಿ ಬಸವಣ್ಣ.

ಧರ್ಮ ನಮ್ಮ ಜೀವನ ಸರ್ವಸ್ವವನ್ನು ನಿಯಂತ್ರಿಸುವ ಪ್ರಜ್ವಲ ಶಕ್ತಿಯಾಗಿ ಬಹಳ ಹಿಂದೆಯೇ ಪರಿಣಮಿಸಿತು. ಅದೇ ನಮ್ಮ ಶಕ್ತಿಯೂ ಆಯಿತು. ದೌರ್ಬಲ್ಯವು ಆಯಿತು. ಕಾಲಕ್ರಮದಲ್ಲಿ ಧರ್ಮ ಎಲ್ಲರನ್ನೂ ಒಟ್ಟುಗೂಡಿಸುವ ವೈಚಾರಿಕ ಶಕ್ತಿಯಾಗುವುದಕ್ಕೆ ಬದಲಾಗಿ ಸಮಾಜವನ್ನು ಹರಿದುಹಂಚುವ ಜಡ ವ್ಯವಸ್ಥೆಯಾಗಿ ಪರಿಣಮಿಸಿತು. ಸಾಮಾಜಿಕ ಮೇಲುಕೀಳುಗಳೂ ಆರ್ಥಿಕ ಏರು–ಪೇರುಗಳೂ ಧಾರ್ಮಿಕ ಅಂಗೀರಣವನ್ನು ಪಡೆದವು. ಧರ್ಮಶಾಸ್ತ್ರಗಳು ಅಯಾವರ್ಣಗಳ ಕರ್ತವ್ಯವನ್ನು ಖಚಿತಗೊಳಿಸಿದ್ದವು. ಮೇಲುವರ್ಣಗಳಲ್ಲಿ ಅವು ಸ್ವಲ್ಪ ಹೆಚ್ಚು ಕಡಿಮೆ ಆದರೂ ಕೆಳವರ್ಣಗಳಲ್ಲಿ ಅವು ಸ್ವಲ್ಪ ಹೆಚ್ಚು ಕಡಿಮೆ ಆದರೂ ಕೆಳವರ್ಣಗಳವರಂತೂ ಅದನ್ನು ಮೀರಿ ನಡೆಯುವ ಹಾಗಿರಲಿಲ್ಲ.

ಹೀಗೆ ನಮ್ಮ ಧರ್ಮ ಒಂದು ಕಡೆಯಲ್ಲಿ ಚತುರ್ವರ್ಣಗಳನ್ನು ಮೇಲುಕೀಳುಗಳನ್ನು ಸೃಷ್ಟಿಸಿ ಪುರೋಹಿತಶಾಹಿಯ ಹಿಡಿತದಲ್ಲಿದ್ದಾರೆ. ರಾಜಸತ್ತೆ ಮತ್ ಸತ್ತೆಗಳು ಸಮಾಜವನ್ನು ನಿಯಂತ್ರಿಸುವ ಶಕ್ತಿಯಾಗಿದ್ದವು. ರಾಜಸತ್ತೆಯ ಪೋಷಣೆಗಾಗಿ ಯುದ್ಧದಲ್ಲಿ ತೊಡಗುವುದು ಸುಂಕತರುವುದಕ್ಕೆ ದುಡಿಯುವುದು ಅಂದಿನ ಪ್ರಜೆಗಳ ಸ್ಥಿತಿಯಾಗಿದ್ದಿತು. ಈ ರಾಜಸತ್ತೆಗೆ ಪೂರಕವೆನಿಸುವ ಮತಸತ್ತೆಯಲ್ಲಿ ಪ್ರತಿಷ್ಠಿತ ಧರ್ಮಗಳ ಆಡಂಬರಗಳೂ ಜನಪದ ಧರ್ಮಗಳ ಕ್ರೂರ ಆಚರಣೆಗಳೂ ಉಲ್ಬಣಗೊಂಡಿದ್ದವು. ಒಟ್ಟು ಜನವರ್ಗದಲ್ಲಿಯೇ ಪುರುಷವರ್ಗವು ಸ್ತ್ರೀವರ್ಗವನ್ನು ತುಳಿಯುತ್ತಲಿದ್ದಿತು. ಹೀಗಾಗಿ ಸಮಾಜದಲ್ಲಿ ರಾಜವರ್ಗ, ಪ್ರಜಾವರ್ಗ, ಪುರೋಹಿತವರ್ಗ, ಭಕ್ತವರ್ಗ, ಪುರುಷವರ್ಗ– ಸ್ತ್ರೀ ವರ್ಗಗಳೆಂಬ ಸೀಳು ತಲೆದೋರಿ ಒಂದು ಇನ್ನೊಂದನ್ನು ಶೋಷಿಸುವಲ್ಲಿ ಜೀವನ ವ್ಯವಸ್ಥೆಯು ಸಾಮಾಜಿಕ ನೈತಿಕ ಪ್ರಜ್ಞೆಗಾಗಿ ಹೋರಾಡಿದವರು ಬಸವಣ್ಣ.

ಬಸವಣ್ಣನವರು ಮಾನವತೆಯ ಬಳ್ಳಿಗೆ ಅರಳಿದ ಮಂದಾರಪುಷ್ಪ ದೇವಲೋಕದ ನಂದನವನದ ಕಲ್ಪವೃಕ್ಷ. ಅವರು ಬದುಕಿನ ನವೀನ ಮೌಲ್ಯಗಳನ್ನು ಪ್ರತಿಷ್ಠಾಪನೆ ಮಾಡಿದ ಪುಣ್ಯಪುರುಷರು. ಅಪೂರ್ವ ಕ್ರಾಂತಿಯನ್ನೆಸಗಿದ ಕ್ರಾಂತದರ್ಶಿಗಳು ಎಂದು ಆರದ ನಂದಾದೀಪವಾಗಿ ಬೆಳಗಿದ ದಿವ್ಯಜ್ಯೋತಿ ಸ್ವರೂಪರು. ಮನುಕುಲದ ಉದ್ಧಾರಕ್ಕಾಗಿ ಮೈಮತ್ತು ಬಂದ ಮಹಾ ಮಹಿಮರು. ದುಯವೆಂಬ ಧರ್ಮಧ್ವಿಜವನ್ನು ಎತ್ತಿ ಹಿಡಿದು ಉಚ್ಛ ನೀಚ, ಬಡವ-ಬಲ್ಲಿದ, ಜಾತ-ಮತ, ವರ್ಣ-ಆಶ್ರಮ ಈ ತರತನು ಸಾಮ್ರಾಜ್ಯದ ಮೇಲೆ ಚೈತ್ರಯಾತ್ರೆಯನ್ನೆಸಗಿದ ವೀರಪುರುಷರು.

ಇಡೀ ವ್ಯವಸ್ಥೆಯನ್ನೇ ಪ್ರಶ್ನಿಸಿ ಅದರ ವಿರುದ್ಧ ಸಿಡಿದುನಿಲ್ಲುವ ಮೊತ್ತ ಮೊದಲನೆಯ ಪ್ರಯತ್ನ ನಡದದ್ದೆ ಬಸವಣ್ಣನವರಿಂದ ವಚನ ಚಳುವಳಿಯ ಮೂಲಕ ಅನ್ಯಾಯವೆಂದು ಕುಡಿದ್ದುದನ್ನು ಪ್ರತಿಭಟಿಸಿ ನಿಲ್ಲುವ ಕ್ರಾಂತಿ ಮನೋಭಾವ ಧರ್ಮ ಬಸವಣ್ಣನವರದು. ಚಿಕ್ಕಂದಿನಲ್ಲಿಯೇ ಉಪನಯನವನ್ನು ವಿರೋಧಿಸಿದ ಹುಟ್ಟು ಕ್ರಾಂತಿಕಾರಿಯಾಗಿ, ಬಾಲ್ಯದಿಂದಲೇ ಪ್ರಾರಂಭವಾದ ಪ್ರತಿಭಟನೆ ಜೀವನದುದ್ದಕ್ಕೂ ಸಾಗಿ ಅಂದಿನ ಸಾಮಾಜಿಕ ಮೌಲ್ಯಗಳನ್ನು ಹಾಗೂ ನೈತಿಕ ಮೌಲ್ಯಗಳ ಬಗ್ಗೆ ಅರಿವು ಮೂಡಿಸಿ, ಮೆಲು-ಕೀಳುಗಳು ಅಂದು ಒಪ್ಪಿಕೊಂಡ ಮೌಲ್ಯವಾಗಿದ್ದಿತು.

'ಶರಣಸನ್ಮತವಪ್ಪ ನಿಜಗುಣಭರಿತನಪ್ಪಡೆ,
ಸತ್ವ ರಜ ತಮ ಕ್ರೋಧ ಬಿಡದನ್ನಕ್ಕ, ಅನು ಭಾವವೆಲ್ಲಿಯದೋ?
ಆತ್ಮಸ್ತುತಿ ಪರನಿಂದೆಯ ಬಿಡದಿನ್ನಕ್ಕ
ಅರಿಷಡ್ ವರ್ಗ ದಶವಾಯು ಬೆರೆಸಿಪ್ಪ
ಕಳಂಕವಪ್ಪ ತನು ಬಿಡದನ್ನಕ್ಕ
ಸಂಸಾರ ಮಾಣ್ದಲ್ಲದೆ
ಶರಣ ಸಜ್ಜನಿಕೆ, ಸಮಯಾಚಾರ, ನಿಜವ್ರತವು
ದುರಾಚಾರಿಗಳಿಗಲ ವಡದು
ನಮ್ಮ ಕೂಡಲಸಂಗನ ಶರಣರಿಗಲ್ಲದೆ'

ಸಾಧಕನಿಗೆ ಶರಣಸಮ್ಮತವಾದ ಸದ್ಗುಣಗಳು ಅಳವಡಿಸಿಕೊಳ್ಳಬೇಕು. ಸತ್ವ ರಜ, ತಮ, ಕ್ರೋಧ ಈ ಗುಣಗಳು ಅಳಿಯಬೇಕು. ಆಗ ಅನುಭಾವ ಆಗುತ್ತದೆ. ಆತ್ಮಸ್ತುತಿ, ಪರನಿಂದನೆಯನ್ನು ತ್ಯಜಿಸಬೇಕು. ಅರಿಷಡ್ವರ್ಗ ದಶವಾಯು ಇವುಗಳಿಂದ ಕೂಡಿದ ಕಳಂಕಿತ ತನುವಿನ ಅಭಿಮಾನ ಅಡಗಬೇಕು ಎಲ್ಲಿಯವರೆಗೆ ಸಾಂಸಾರಿಕ ವ್ಯಾಮೋಹ ನಾಶವಾಗುವುದಿಲ್ಲವೋ ಅಲ್ಲಿಯವರೆಗೆ ಶರಣಸಜ್ಜನಿಗೆ ಧರ್ಮಾಚಾರ

ಆತ್ಮಪಥಗಮನ ಸಮನಿಸವು. ಕೂಡಲಸಂಗನ ಶರಣರು ಮಾತ್ರ ಇವುಗಳನ್ನು ಅಳವಡಿಸಿಕೊಂಡು ಸಾಧನೆಯಲ್ಲಿ ಮುನ್ನಡೆಯಬಲ್ಲರು, ದುರಾಚಾರಿಗಳಿಗೆ ಸಾಧ್ಯವಾಗದು.

"ನಾರುಳಿಯ ಹಣಿದವನಾರಾದಡೆಯೂ ಆಡರೆ?
ನಾರುಳಿದಡೆ ಮುಂದೆ ಅಂಕುರಿತ ಫಲತಪ್ಪದು,
ಮಾಡುವನ್ನಕ್ಕ ಫಲದಾಯಕ
ಮಾಟವಜಿತು ನಿಮ್ಮಲ್ಲಿ ಸಯವಾದಡೆ
ಆತನೆ ಅಚ್ಚ ಶರಣನಯ್ಯಾ, ಕೂಡಲಸಂಗಮದೇವಾ"

ತೆಂಗನ್ನು ಒಂದೇ ಏಟಿಗೆ ಕೊಚ್ಚಿ ನಾರುಳಿಯದಂತೆ ಕತ್ತರಿಸುವುದು ಪಂಥಕಟ್ಟಿ ಆಡುವ ಒಂದು ಬಗೆಯ ಜೂಜಾಟ, ಅದು ನಾರುಳಿಯ ಹಣಿದ ಅದನ್ನು ಯಾರು ಬೇಕಾದರೂ ಆಡಬಹುದು, ಆದರೆ ದೇಹವೆಂಬ ನಾರುಳಿಯ ಹಣಿದವನು ದೇಹ ನಾನೆಂಬ ದೇಹ ನನ್ನದೆಂಬ ನಾರು ಉಳಿಯದಂತೆ ಆಡುವುದು ಸುಲಭವಲ್ಲ. ಅ ನಾರು ಉಳಿಯಿತೋ ಪುನರ್ಭವ ತಪ್ಪದು ಕರ್ಮಫಲಭೋಗ ನಿಲ್ಲದು, ದೇಹವಿಡಿದು ಬಾಳಬೇಕು. ದೇಹದ ಜಡತೆಯನರಿದು ಅದರ ಮೋಹವನ್ನು ಈಡಾಡಬೇಕು. ನಿರಯಂ ಹಾಗೂ ನಿರ್ಮೋಹಿಯಾಗಿ ಕರ್ಮ ಮಾಡಬೇಕು. ಕರ್ತೃಭಾವ ತ್ಯಜಿಸಿ ಬದುಕಬೇಕು. ಮಾಟಗಳನ್ನಾಚರಿಸಬೇಕು. ಹಾಗಾದಲ್ಲಿ ಕರ್ಮ ಬಂದಿಸದು. ಜೀವನ ದೇಹ-ಕರ್ಮ ಬಂಧನ ನೀಗಿ ದೇವನಲ್ಲಿ ಸಯವಾಗುತ್ತಾನೆ. ಸಮರಸಗೊಳ್ಳುತ್ತಾನೆ ಅವನು ಅಚ್ಚ ಶರಣ, ನಿಜವಾದ ಶರಣ

"ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ
ಅ ಭಕ್ತನು ಕಾಣುತ್ತ ಆಸನ ತ್ಯಜತೆಯ ಮಾಡುತ್ತ
ಕೊಂಕುತ್ತ ಕೈ ಮುಗಿದು ನಿಂದಿರ್ದ ಬಾಗಿ ಜಳಕುತ್ತ
'ಬಿಜಯಂ ಮಾಡಿ ದೇವಾ' ಎಂದು ಕರೆದು ಕುಳ್ಳಿರಿಸಿ
ಪಾದಾರ್ಚವೆಯಿಂ ಮಾಡಿ ಪಾದೋದಕಮಂ ಕೊಂಡು
ವಿಭೂತಿ-ವೀಳೆಯಮಂ ಕೊಟ್ಟು
ಕಂಗಳ ತುಂಬಿ ನಿರೀಕ್ಷಿಸಿ, ಶ್ರೋತ್ರ ತುಂಬಿ ಹಾರೈಸಿ
ಬಾಯಿ ತುಂಬಿ ಮಾತನಾಡಿ, ಏಗುವುದು ಏ ಬೆಸನೆಂದು
ತನು ಕರಾಗಿ ಮನಕರಗಿ ಮಾಡುವುದು ಭಕ್ತಿಸ್ಥಲ

ಬಡವನಾಗಲಿ, ಬಲ್ಲಿದವನಾಗಲಿ ಇನಿತು ಮುಖ್ಯವಾಗಿ
ಮಾಡಿಸಿಕೊಂಬುದು ಜಂಗಮಸ್ಥಲ
ಈ ಎರಡೊಂದಾದ ಘನವಂತಿಂತೆಂದು ಉಪಮಿಸಬಾರದಂತಿರಲಿ!
ಇತಿತಲ್ಲದೆ ಮಾಡಿದ ಮಾಟ ಭಕ್ತಿಸ್ಥಲಕ್ಕೆ ಸಲ್ಲದು; ಫಲದಾಯಕನ್ನೆಸೆ!
ಇನಿತಲ್ಲದೆ ಮಾಡಿಸಿಕೊಂಬುದು ಜಂಗಮಸ್ಥಲಕ್ಕೆ ಸಲ್ಲದು;
ಉಪಜೀವಿತನ್ನೆಸೆ!
ಈ ಎರಡಕ್ಕಿಯೂ ಭವ ಹಿಂಗದು, ಕಾಣ ಕೂಡಲಸಂಗಮದೇವಾ"

ಭಕ್ತ ಜಂಗಮರ ಭಕ್ತಿ ಸಂಬಂಧವನ್ನು ಹೇಳುತ್ತಿದ್ದಾರೆ. ಭಕ್ತನ ಬಳಿಗೆ ಜಂಗಮ ಬಂದಾಗ ಭಕ್ತ ಹೇಗೆ ಆತನನ್ನು ಸ್ವಾಗತಿಸಿ ಭಕ್ತಿಯಿಂದ ಉಪಚರಿಸಬೇಕೆಂಬುದರ ವಿವರಣೆ ಇಲ್ಲಿದೆ. ಹಾಗೆ ಜಂಗಮ ಆ ಭಕ್ತನ ಭಕ್ತಿಯಪಚಾರವಚನ್ನು ಸ್ವೀಕರಿಸಿ ಅವನನ್ನು ಅನುಗ್ರಹಿಸಬೇಕೆಂಬ ಸೂಚನೆಯೂ ಇದೆ. ಇಲ್ಲಿ ಜಂಗಮ ಮತ್ತು ಭಕ್ತ ಈ ಎರಡೂ ಭಾವನೆಗಳೂ ಒಂದಾಗುತ್ತವೆ. ಈ ಎರಡೂ ಬಂದಾಗ ಘನ, ಇದು ಶರಣಸ್ಥಲದ ಅವಸ್ಥೆ. ಈ ಭಾವ ಅಳವಟ್ಟಿಗೆ ಭವ ಹಿಂಗುತ್ತದೆ ಇಲ್ಲವಾದರೆ ಹಿಂಗುವುದಿಲ್ಲ.

"ಶರಣ ನಿದ್ರೆಗೈದಡೆ ಜಪ ಕಾಣಿರೊ
ಶರಣನೆದ್ದು ಕುಳಿತಡೆ ಶಿವರಾತ್ರಿ ಕಾಣಿರೊ
ಶರಣ ನಡೆದುದೆ ಪಾವನ ಕಾಣಿರೊ
ಶರಣ ನುಡಿದುದೆ ಶಿವತತ್ವ ಕಾಣಿರೊ
ಕೂಡಲ ಸಂಗನ ಶರಣನ
ಕಾಯವೆ ಕೈಲಾಸ ಕಾಣಿರೊ"

ಶರಣ ತಾನೇ ಪರಂಜ್ಯೋತಿ ಸ್ವರೂಪನಾದುದರಿಂದ ಆತನ ಕ್ರಿಯೆಗಳೆಲ್ಲವೂ ಶಿವಬೆಳಕನ್ನೆ ಬೀರುತ್ತವೆ. ಆತ ನಿದ್ದೆ ಮಾಡಿದರೆ ಅದು ಜಪ ಎಚ್ಚರಗೊಂಡರೆ ಅದು ಶಿವಭಕ್ತಿಯ ಜಾಗರಣೆ. ಆತ ನಡೆದುದೇ ಪಾವನ, ನುಡಿದುದೇ ಶಿವತತ್ವ ಆತನ ದೇಯವೇ ಕೈಲಾಸ, ಆನಂದ ಭಕ್ತಿಯ ನಿಲಯ, ಲಿಂಗನೆಲೆ ಲಿಂಗಭಾವದಲ್ಲಿ ಸಂಪೂರ್ಣವಾಗಿ ಆತ ತನ್ಮಯನಾಗಿರುವುದರಿಂದ ಅದನ್ನು ಬಿಟ್ಟು ಬೇರೇನನೂ ಆತನಲ್ಲಿ ಕಾಣಲಾಗುವುದಿಲ್ಲ.

"ಆಚಾರ ಲಿಂಗವಿಡಿದು ಅನುಭಾವಲಿಂಗ ಸಿದ್ಧಿ,
ಅನುಭಾವಲಿಂಗವಿಡಿದು ಮಾರ್ಗಕ್ರಿಯಾಲಿಂಗಸಿದ್ಧಿ,
ಮಾರ್ಗಕ್ರಿಯಾ ಲಿಂಗವಿಡಿದು ಮೀಜಿದ ಕ್ರಿಯಾಲಿಂಗಸಿದ್ಧಿ
ಮೀಜಿದ ಕ್ರಿಯಾಲಿಂಗವಿಡಿದು ಕ್ರಿಯಾ ನಿಷ್ಪತ್ತಿಲಿಂಗಸಿದ್ಧಿ
ಇದು ಕಾರಣ ಕೂಡಲಸಂಗಮದೇವಾ ಲಿಂಗವಿಡಿದು ಲಿಂಗಸಿದ್ಧಿ"

ಆಚಾರಲಿಂಗವಿಡಿಯುವುದು ಎಂದರೆ ಸದಾಚಾರವನ್ನು ಅಳವಡಿಸಿಕೊಳ್ಳುವುದು ಹೀಗೆ ಸದಾಚಾರವನ್ನು ಅಳವಡಿಸಿಕೊಂಡ ಸಾಧಕ ಗುರುಕರುಣೆಗೆ ಪಾತ್ರನಾಗುತ್ತಾನೆ. ಗುರುಪದೇಶ ಪಡೆಯುತ್ತಾನೆ. ಇದೇ ಅನುಭಾವಲಿಂಗಸಿದ್ಧಿ. ಗುರುವಿನಿಂದ ಇಷ್ಟಲಿಂಗವನ್ನು ಸ್ವೀಕರಿಸಿ ಶಿವಪಥವ ಪೂರ್ವಭೂಮಿಕೆಗಳನ್ನು ಸಾಧಿಸುತ್ತಾನೆ. ಭಕ್ತ ಮಹೇಶ-ಪ್ರಸಾದಿ ಎಂದ ಮೂರು ಭೂಮಿಕೆಗಳನ್ನು ಕ್ರಮಿಸುತ್ತಾನೆ ಇದು ಮಾರ್ಗಕ್ರಿಲಿಂಗಸಿದ್ಧಿ. ಅಂದಿನ ಧಾರ್ಮಿಕ, ಸಾಮಾಜಿಕ, ನೈತಿಕ ಪರಿಸರವನ್ನು ಜನ ಸಾಮಾನ್ಯರ ಅಜ್ಞಾನವನ್ನು ಕಂಡು ಬಸವಣ್ಣನವರು ಮರುಗಿದ್ದರು. ಧರ್ಮದ ಬಹುದೊಡ್ಡ ತತ್ವಗಳನ್ನು ಅದಕ್ಕೆ ವಿರುದ್ಧವಾಗಿ ಸಂಕುಚಿತ ನಡೆಯಲ್ಲಿ ತೊಡಗಿರುವ ಉತ್ತಮರನ್ನು ಕಂಡು ಕೆರಳಿ

ಏನಯ್ಯಾ! ವಿಪ್ರರು ನುಡಿದಂತೆ ನಡೆಯರು, ಇದೆಂತಯ್ಯಾ?
ತಮಗೊಂದು ಬಟ್ಟೆ ಶಾಸ್ತ್ರಕ್ಕೊಂದು ಬಟ್ಟೆ!
ಕೂಡಲ ಸಂಗಮ ದೇವಯ್ಯಾ. . .

ಎಂದು ಉದ್ಗಾರ ತೆಗೆಯುತ್ತಾರೆ. ಬಸವಣ್ಣನವರ ವಚನಗಳು ಹಿಂದೂ ಧಾರ್ಮಿಕ, ಸಾಮಾಜಿಕ ವ್ಯವಸ್ಥೆಯು ರೂಪಿಸಿದ್ದ ಶುದ್ಧ-ಅಶುದ್ಧತೆಯ ಕಲ್ಪನೆಯನ್ನು ನಿರಾಕರಿಸುತ್ತದೆ. ಶಾಶ್ವತ ಅಶುದ್ಧತೆಯ ಒತ್ತಾಯಗಳಿಂದ ಸಾಮಾಜಿಕವಾಗಿ ಬಳಸಲಾಗದ ವರ್ಗವಾಗಿದ್ದ ಹಿಂದುಳಿದವರ ಬಗ್ಗೆ ಹೊಸ ಕಾಳಜಿಗಳನ್ನು ಬಸವಣ್ಣನವರ ವಚನಗಳಲ್ಲಿ ಕಾಣಬಹುದು. ಹುಟ್ಟೇ ಕಾರಣವಾಗಿ ಜಾತಿ ಅಸ್ಪೃಶ್ಯತೆಯ ಮಿತಿಗಳಿಗೆ ಒಳಗಾಗುತ್ತಿದ್ದ ಸ್ಥಾವರ ಹಾಗೂ ಕಠೋರ ನಿಯಮಗಳನ್ನು ಇಲ್ಲಿ ತಿರುಗುಮುರುಗಾಗುತ್ತವೆ.[೧]

೧. ವೀರಶೈವ ಧರ್ಮ ದರ್ಶನ, ಡಾ.ಯು.ಆರ್.ಅನಂತಮೂರ್ತಿ, ಪು. ೨೯೫.

ಕೊಲುವವನೇ ಮಾದಿಗ ಹೊಲಸು ತಿಂಬುವವನೇ ಹೊಲೆಯ
ಕುಲವೇನೋ ಅಂದಿನ ಕುಲವೇನೋ?
ಸಕಲ ಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲ ಸಂಗನ ಶರಣರೆ ಕುಲವರು

ನಡೆನುಡಿಗಳ ಸಂಬಂಧವನ್ನು ಹೊಲೆತನವನ್ನು ಗುರುತಿಸುವ ಬಸವಣ್ಣನವರು ಅಶುದ್ಧತೆಯ ಹೊಸ ರೀತಿಯಲ್ಲಿ ವಿವರಿಸುತ್ತಾರೆ. ನುಡಿಗಿಂತ ಮೊದಲು ಸಾಧನೆಯನ್ನು ಬಸವಣ್ಣನವರು ಕಾರ್ಯಗತಗೊಳಿಸಿದರು.

ಜಾಗತಿಕ ಮಾನವನ ಹಕ್ಕು ಬಾದ್ಯತೆಗಳ ಪ್ರಣಾಳಿಕೆಯ ಹಿನ್ನಲೆಯಲ್ಲಿ "ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು" ಎಂಬ ಮಾತು ತೀರಾ ಸಹಜವಾಗಿ ಕಾಣಬಹುದು. ಆದರೆ ಎಂಟುನೂರು ವರ್ಷಗಳ ಹಿಂದಿನ ಹಿಂದೂ ಸಮಾಜದಲ್ಲಿ ಇದು ಊಹಿಸಲಿಕ್ಕೂ ಆಗದ ಧರ್ಮದ್ರೋಹವಾಗಿ ಪರಿಗಣಿತವಾಗಿತ್ತು. ಅವರವರ ಕರ್ಮಕ್ಕನುಗುಣವಾಗಿ ಆಯಾ ವರ್ಣ ಜಾತಿಗಳಲ್ಲಿ ಜನ್ಮವೆತ್ತಿದ್ದ ಜನ ಅದಕ್ಕನುಗುಣವಾಗಿ ನಡೆದುಕೊಳ್ಳುವುದೇ ಸನಾತನ ಧರ್ಮವಾಗಿತ್ತು. ಅದರ ಪ್ರಕಾರ ಶೂದ್ರರು ಅಸ್ಪೃಶ್ಯರಿಗೆ ವಿದ್ಯಾಭ್ಯಾಸವಿರಲಿಲ್ಲ. ಅವರವರು ಕೈಗೊಂಡ ಉದ್ಯೋಗಗಳೇ ಜಾತಿಗಳಾಗಿ ಪರಿಣಮಿಸುತ್ತಿದ್ದವು.

ಇದನ್ನು ತೀವ್ರವಾಗಿ ಪ್ರತಿಭಟಿಸಿ ಅದಕ್ಕೆ ಮೊದಲ ಬಾರಿಗೆ ಪ್ರಬಲವಾದವನ್ನು ಕೊಟ್ಟಿದ್ದು ಬಸವಣ್ಣ ಇವರ ಯಾವುದೇ ವಿಚಾರವನ್ನು ಕುರಿತು ಪ್ರತಿಭಟನೆ ತಿರಸ್ಕಾರಗಳಿಗೆ ಮೂಲಕಾರಣ ಅದರಲ್ಲಿ ಇರುವ ಮಾನವ ಕೃತ ಶ್ರೇಣಿಯ ಕುಲ ಜಾತಿ, ವರ್ಣ, ಲಿಂಗಭೇದಾದಿ ತಾರತಮ್ಯಗಳು[೧] ಅದರಲ್ಲೂ ಮುಖ್ಯವಾಗಿ ಕಾರಣವಾಗಿದ್ದು ಜಾತಿವ್ಯವಸ್ಥೆ ಬಸವಣ್ಣನವರ ಅಗಾಧ ಸಿಟ್ಟು ಪ್ರತಿರೋಧ ಅಸಹನೆಗಳು ಉಂಟಾಗಲು ಕಾರಣ ವರ್ಣ ವ್ಯವಸ್ಥೆಯ ಜಾತೀಯ ವಿಷಮತೆ ಮೌಢ್ಯಗಳನ್ನು ವ್ಯವಸ್ಥಿತವಾಗಿ ಬಿತ್ತಿ ಯಥಾವತ್ತಾಗಿ ಕಾಪಾಡಿಕೊಳ್ಳುತ್ತಾ ಬಂದಿರುವುದು. ಆದ್ದರಿಂದಲೇ ಬಸವಣ್ಣ ಜನ್ಮಾಧಾರಿತ ಕುಲ-ಜಾತಿ ತಾರತಮ್ಯಗಳನ್ನು ಪ್ರಶ್ನಿಸುತ್ತಾ ವಿಚಾರ ಪೂರ್ವಕವಾಗಿ ವಿಶ್ಲೇಷಿಸಿದ್ದಾರೆ. ಎಲ್ಲಾ ಮಾನವರಲ್ಲೂ ಜೀವ ಸೃಷ್ಟಿಯಾಗುವ ಶಾಶ್ವತ ಪ್ರಾಕೃತಿಕ ವ್ಯವಹಾರಗಳು ಒಂದೇ ಬಗೆಯವು. ಹುಟ್ಟಿದ ಮಾನವರಲ್ಲಿ ಆಸೆ-ಆಮಿಷ, ರೋಷ-ಹರುಷದ ವಿಷಯಗಳು ಒಂದೇ. ಹೀಗಿರುವಲ್ಲಿ ಶ್ರೇಷ್ಠ ಕುಲಜ ಎಂಬುದಕ್ಕೆ ಅವು

---

೧. ಬಸವಣ್ಣನವರ ಕ್ರಾಂತಿಮಾರ್ಗ, ಡಾ.ಕೆ.ಎ.ಲತಾ, ಪು. ೭೧.

ದುರದೃಷ್ಟ? ಶ್ರೇಣೀಕೃತ ವರ್ಣ ವ್ಯವಸ್ಥೆಯಿಮದ ಪ್ರಯೋಜನವೇನೂ ಜನರಲ್ಲಿ ಸ್ಪಷ್ಟವಾದ ಭಿನ್ನತೆಗಳು ಹುಟ್ಟಿನಿಂದ ಬಂದವಲ್ಲ ಜೀವನೋಪಾಯಕ್ಕಾಗಿ ಉಂಟಾದವು ಅವರವರ ಗುಣ–ಕರ್ಮಗಳ ಮೇಲೆ ಜಾತಿಗಳು ನಿರ್ಮಿತವಾದುದನ್ನು ಬಸವಣ್ಣನವರು ಮನಗಾಣಿಸುತ್ತಾರೆ.

"ಅಱಿದುದು ಅಱಿಯಲೊಲ್ಲದು ಅದೆಂತಯ್ಯಾ?
ಮಱಿದುದ ಮಱಿಯಲೊಲ್ಲದು ಅದೆಂತಯ್ಯಾ?
ಅಱಿದು ಮಱಿದ ಮನವ
ಕೂಡಲಸಂಗಯ್ಯ ತಾನೇ ಬಲ್ಲ

ಮೇಲಿನ ವಚನದಲ್ಲಿ ಅರಿತುದನ್ನು, ಮರೆತುದನ್ನು ಮರೆಯಬೇಕು ಇದು ಅರ್ಥವತ್ತಾದ ಮಾತು. ನಾನು ಬೌದ್ಧಿಕವಾಗಿ ಅನೇಕ ವಿಷಯಗಳನ್ನು ಅರಿತಿರುತ್ತೇನೆ. ಆದರೆ ಅವು ಅಂತರಂಗದ ಒಳಗೆ ಇಳಿದು ಆಚರಣೆಯಲ್ಲಿ ಅಳವಟ್ಟಿರುವುದಿಲ್ಲ. ಅಂತಹ ಅರಿವು ವ್ಯರ್ಥ. ಬುದ್ಧಿ ಅರಿತುದನ್ನು ಅಂತರಂಗ ಅಳವಡಿಸಿಕೊಳ್ಳಬೇಕು. ತಾನು ನುಡಿದ ಸಂಕಲ್ಪವನ್ನು ಈಡೇರಿಸಿಕೊಳ್ಳಬೇಕು. ಹಾಗೆಯೇ ಎಷ್ಟೋ ವಿಷಯಗಳನ್ನು ಮರೆಯಬೇಕು. ಹಾಗೇ ಮರೆತುದನ್ನು ಮತ್ತೆಂದೂ ಆಚರಿಸಬಾರದು. ಈ ಎರಡು ನಿರಂತರ ಜಾಗ್ರತನಾದ ಸಾಧಕನಿಗೆ ಮಾತ್ರ ಸಾಧ್ಯ. ಶಿವಯೋಗಿಗಳು ಅರಿತದ್ದನ್ನು ನಾವು ಅರಿತು ಅಳವಡಿಸಿಕೊಂಡು ಅವರು ಮರೆತದ್ದನ್ನು ನಾವು ಬಿಟ್ಟು ಆತ್ಮಭಿನ್ನವಾದ ಬೇಧ ಪ್ರಪಂಚವನ್ನು ಮರೆತಿರುವ ಮನಸ್ಸನ್ನು ಕೂಡಲಸಂಗನ ಕರುಣೆಯಿಂದ ಪಡೆಯಬೇಕು.

"ಹಾಲೆಂಜಲು ಪೇಯನ, ಉದಕವೆಂಜಲು ಮತ್ಸ್ಯದ ಪುಷ್ಪವೆಂಜಲು ತುಂಬಿಯ
ಈ ಎಂಜಲವನತಿಗಳೆವಡೆ ಎನ್ನಳವಲ್ಲ
ಬಂದುದ ಕೈಕೋ ಕೂಡಲಸಂಗಮ ದೇವಾ"

ನಾವು ದೇವರಿಗೆ ಅರ್ಪಿಸುವ ಹಾಲು ಕರುವಿನ ಎಂಜಲು, ನೀರು ಮೀನಿನ ಎಂಜಲು, ಪುಷ್ಪ ದುಂಬಿಯ ಎಂಜಲು, ನೀರು ಮೀನಿನ ಎಂಜಲು ಪುಷ್ಪ ದುಂಬಿಯ ಎಂಜಲು ಇವುಗಳಿಂದ ಆತನನ್ನು ಪೂಜಿಸುವುದೆಯ? ಈ ಎಂಜಲುಗಳನ್ನು ಮೀರುವುದು ನನಗೆ ಸಾಧ್ಯವಿಲ್ಲ. ಅರ್ಪಿಸಬೇಕಾದ ಪದಾರ್ಥಗಳ ಮೀಸಲನ್ನು ಕಾಪಾಡಿಕೊಳ್ಳಲು ಆಗುವುದಿಲ್ಲ. ಮನಸ್ಸಿನ ಮೀಸಲನ್ನು ಕಾಪಾಡಿಕೊಳ್ಳಬೇಕು. ಶರಣ ತನ್ನ ಮನಸ್ಸು ಅರ್ಪಿಸುತ್ತಾನೆ. ಹಾಗೇ ಅರ್ಪಿತವಾದ ಮನಸ್ಸಿನಿಂದ ಹೊರಗಿನ ವಸ್ತುಗಳೆಲ್ಲಾ

ಪವಿತ್ರವಾಗುತ್ತವೆ. 'ಬಂದುದ ಕೈಕೋ' ಅರ್ಥವಾಗುತ್ತದೆ. ನಾನು ಯಾವುದನ್ನು ಏಕೈಕ ನಿಷ್ಠೆಯಿಂದ ಅರ್ಪಿಸುತ್ತೇನೆಯೋ ಅದನ್ನು ನೀನು ಒಪ್ಪಿಕೋ ಎಂದು ಆತನಿಗೆ ಶರಣಾಗುತ್ತಾರೆ. ತನ್ನನ್ನೇ ಅರ್ಪಿಸಿಕೊಳ್ಳುವ 'ಸಾಯೋ ಪ್ರಸಾದಿಯ ನಿಲವು ಇಲ್ಲಿ ಕಾಣುತ್ತೇವೆ.

"ಶುದ್ಧವಾಯಿತ್ತೆಂಬೆನೆ? ಸುಯಿಧಾನಿ ನಾನಲ್ಲ
ಅನುವಾಯಿತ್ತೆಂಬೆನೆ? ಅವಧಾನಿ ನಾನಲ್ಲ
ಸುಯಿಧಾನಿ ಅವಧಾನ ಅರ್ಪಿತವ ನಾನಱಿಯೆ
ಇದ್ದ ಪರಿಯಲಿ ನೀಡಿದಡೆ ಬಂದ ಪರಿಯಲ್ಲಿ ಕೈಕೋ
ಕೂಡಲಸಂಗಮದೇವಾ"

'ಸುಯಿಧಾನ' 'ಅವಧಾನ' ಎಂಬ ಎರಡು ಮಾತುಗಳನ್ನು ಇಲ್ಲಿ ಬಳಸಿದ್ದಾರೆ. 'ಸುಯಿಧಾನ' ಎಂದರೆ ಹೊರಗಿನ ಸಾಮಗ್ರಿ 'ಅವಧಾನ' ಎಂದರೆ ಅಂತರಂಗದ ಎಚ್ಚರಿಕೆ. ಪೂಜೆ ಪ್ರಸಾಧಗಳಿಗಾಗಿ ಸಂಗ್ರಹಿಸುವ ಹೊರಗಿನ ಸಾಮಗ್ರಿಯಲ್ಲಿಯೂ ಪರಿಶುದ್ಧತೆಯಿಲ್ಲ. ನಿನಗೊಪ್ಪುವಂತೆ ನೀಡುವ ಅಂತರಂಗದ ಶುದ್ಧಿಯೂ ನನಗಿಲ್ಲ. ಹೊರಗಿನ ಪದಾರ್ಥಗಳ ಶುದ್ಧಾಶುದ್ಧತೆಯನ್ನು ತಿಳಿದವನು ಅವುಗಳನ್ನು ಅರ್ಪಿಸುವಾಗ ಅಂತರಂಗದ ನಿರಂತರ ಜಾಗೃತಿಯುಳ್ಳವನು ಅವದಾನಿ. ಈ ಎರಡನ್ನು ನಾನು ತಿಳಿದವನ್ನಲ್ಲ. ಬಂದುದನ್ನು ಸರ್ವಾರ್ಪಣೆಯಿಂದ ಸಮರ್ಪಿಸುವುದನ್ನಷ್ಟೇ ನಾನು ಬಲ್ಲವನು. ನಾನು ಹೇಗೆ ಕೊಡುತ್ತೇನೆಯೋ ಹಾಗೆ ನೀನು ಸ್ವೀಕರಿಸಿ ನನ್ನನ್ನು ಉದ್ಧರಿಸು ಎಂದ ಈ ಮಾತಿನಲ್ಲಿ ಶರಣ ಸಾಧನೆಯ ಸಂಪೂರ್ಣ ಶರಣಾಗತಿ ವ್ಯಕ್ತವಾಗುತ್ತದೆ.

"ಬಸವ ಬಾರೈ, ಮುತ್ಸ್ಯಲೋಕದೊಳಗೆ ಭಕ್ತರುಂಟೆ? ಹೇಳಯ್ಯಾ
ಮತ್ತಾರೋ ಇಲ್ಲಯ್ಯಾ, ಮತ್ತಾರೂ ಇಲ್ಲಯ್ಯಾ, ಮತ್ತಾರೂ ಇಲ್ಲಯ್ಯಾ
ನಾನೊಬ್ಬನೆ ಭಕ್ತನು, ಮರ್ತ್ಸ್ಯಲೋಕದೊಳಗೂ ಭಕ್ತರೆಲ್ಲರೂ
ಜಂಗಮಲಿಂಗ, ನೀನೆ ಅಯ್ಯಾ; ಕೂಡಲಸಂಗಮದೇವಾ"

ಇದೊಂದು ಅರ್ಥಗರ್ಭಿತವಾದ ಸುಂದರ ವಚನ. ಈ ಮರ್ತ್ಯಲೋಕದ ಸಾಧಕರೆಲ್ಲರೂ ಸಾಕ್ಷಾತ್ ಜಂಗಮಸ್ವರೂಪರೆಂಬುದನ್ನು ಅಡಕವಾದ ಮಾತುಗಳಲ್ಲಿ ಕಲಾತ್ಮಕವಾಗಿ ಹಿಡಿದಿಟ್ಟಿದ್ದಾರೆ. ಈ ಮರ್ತ್ಯಲೋಕದೊಳಗೆ ಭಕ್ತರುಂಟೇ ಹೇಳಯ್ಯಾ? ಎಂದು ಶಿವನೇ ಬಸವಣ್ಣನವರನ್ನು ಕೇಳುತ್ತಾನೆ. ಅದಕ್ಕೆ ಅವರು ಕೊಡುವ ಉತ್ತರ

'ಮತ್ತ್ಯಾರೂ ಭಕ್ತರಿಲ್ಲ' ಎಂದು ಮತ್ತೆ ಮತ್ತೆ ಮೂರು ಸಾರಿ ಹೇಳುತ್ತಾ 'ನಾನೊಬ್ಬನೆ ಭಕ್ತ' ಎಂದು ಘೋಷಿಸಿಕೊಳ್ಳುತ್ತಾರೆ ಅಷ್ಟನ್ನೆ ಕೇಳಿದಾಗ ಬಸವಣ್ಣನರಿಗೆ ಈ ಅಹಂಕಾರವೇ ಎಂದು ಆಶ್ಚರ್ಯವಾಗುತ್ತದೆ. ಆದರೆ ಮುಂದಿನ ಮಾತು ಥಟ್ಟನೆ ಅದಕ್ಕೊಂದು ವಿಶಿಷ್ಟ ತಿರುವನ್ನು ಕೊಡುತ್ತದೆ. 'ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ ಜಂಗಮಲಿಂಗ, ನೀನೇ ಅಯ್ಯಾ?' ಎನ್ನುತ್ತಾರೆ ಬಸವಣ್ಣನವರು. ಈ ಸರಳವಾದ ಮಾತು ಅವರ ಮಹೋನ್ನತವಾದ ಆಂತರಿಕ ನಿಲುವಿನತ್ತ ನಮ್ಮನ್ನು ಕೊಂಡೊಯ್ಯುತ್ತದೆ. ಈ ಜಗತ್ತಿನಲ್ಲಿರುವವರೆಲ್ಲರೂ ಲಿಂಗಸ್ವರೂಪವಾದ ಜಂಗಮರು. ನಾನು ಅವರ ಸೇವೆಯಲ್ಲಿ ತೊಡಗಿರುವ ಭಕ್ತ ಎನ್ನುವ ಈ ಮಾತು ಇಡೀ ಅವರ ಜೀವನಕ್ಕೆ ಹಿಡಿದ ಕನ್ನಡಿಯಂತಿದೆ. ಸಚರಾಚರವಾದ ಈ ಸೃಷ್ಟಿಯನ್ನೇ ಜಂಗಮ ರೂಪವಾಗಿ ಕಂಡವರು ಬಸವಣ್ಣನವರು. ಆ ದಾರ್ಶನಿಕ ನಿಲುವಿನಲ್ಲಿ ನಿಂತು ಅವರ ಒಳಿತಿಗಾಗಿ ತಮ್ಮನ್ನು ಅರ್ಪಿಸಿಕೊಂಡವರು. ಅದಕ್ಕಾಗಿ ನಿರಂತರವಾಗಿ ದುಡಿದವರು ಅತ್ಯಂತ ಸರಳವಾದ ಮಾತುಗಳಲ್ಲಿ ಚಮತ್ಕಾರರೂಪವಾದ ಅಭಿವ್ಯಕ್ತಿಯಲ್ಲಿ ಅದನ್ನು ಹಿಡಿದಿಟ್ಟಿರುವುದು ಈ ವಚನ ಅಪೂರ್ವ ಸಾಧನೆಯಾಗಿದೆ.

> "ಒಳಗೆ ಕುಟಿಲ, ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬವರ
> ಬೆಲ್ಲನೊಲ್ಲವಯ್ಯೊ ಲಿಂಗವು
> ಅವರು ಪಥಕ್ಕೆ ಸಲ್ಲರು ಸಲ್ಲರಯ್ಯಾ
> ಒಳಹೊರಗೊಂದಾಗದವರಿಗೆ
> ಅಳಿಯಾಸೆದೋರಿ ಬೀಸಾಡುವನವರ
> ಜಗದೀಶ ಕೂಡಲಸಂಗಮದೇವ"

ಆದರೆ ನಮ್ಮಲ್ಲಿ ಏಕೋಭಾವವಿರದೆ ನಮ್ಮ ನಡೆನುಡಿಗಳು ಬೇರೆ ಬೇರೆಯಾಗಿದ್ದಾಗ ನಾವು ಗೋಮುಖವ್ಯಾಘ್ರರಾಗುತ್ತೇವೆ. ಇಂಥ ಭಕ್ತರನ್ನು ಕೂಡಲ ಸಂಗಮದೇವ ತಿರಸ್ಕರಿಸುವನು ಎಂದು ಬಸವಣ್ಣನವರು ಸ್ಪಷ್ಟಪಡಿಸುತ್ತಾರೆ.

> "ಎನಿಸು ಕಾಲ ಕಲ್ಲು ನೀರೊಳಗಿದ್ದದೇನು,
> ನೆನೆದು ಮೃದುವಾಗಬಲ್ಲದೇ?
> ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ
> ಮನದಲ್ಲಿ ದೃಢವಿಲ್ಲದನ್ನಕ್ಕ
> ನಿಧಾನವ ಕಾಯ್ದಿರ್ದ ಬೆಂತರನಂತೆ
> ಅದರ ವಿಧಿ ಎನಗಾಯಿತ್ತು. ಕೂಡಲ ಸಂಗಮದೇವಾ"

ಬಾಹ್ಯ ಧರ್ಮಾಚರಣೆ ಮತ್ತು ಭಾವನೆಗಳಲ್ಲಿ ವ್ಯತ್ಯಾಸಗಳು ಕಂಡುಬಂದಾಗ ನಮ್ಮ ಆಚರಣೆಗಳು ಮತ್ತು ಧ್ಯಾನ–ಪೂಜೆಗಳು ನಿಷ್ಪ್ರಯೋಜಕವಾಗುತ್ತವೆ. ಆದ್ದರಿಂದ ಎಂಥದೇ ಕಷ್ಟಬಂದರೂ ದೃಢ ನಿರ್ಧಾರದೊಂದಿಗೆ ಮುನ್ನಡೆಯಬೇಕಾಗುತ್ತದೆ.

"ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲರೂ
ಸಲಿಗೆಯಿಂದ ಒಳಗೈದಾರೆ
ಅನು ದೇವಾ ಹೊರಗಣವನು
ಸಂಬೋಳಿ ಸಂಬೋಳಿ ಎನ್ನುತ್ತ ಇಂಬಿನಲ್ಲಿ ಇದ್ದೆನೆ
ಕೂಡಲ ಸಂಗಮದೇವಾ ನಿಮ್ಮ ನಾಮವಿಡಿದ ಅನಾಮಿಕ ನಾನು"

ಎಂದು ಬಸವಣ್ಣನವರು ಹೇಳುವಲ್ಲಿ ತಾವು ಇಂಥದ್ದಕ್ಕೆಲ್ಲ ಹೊರಗಿನವರು ಮತ್ತು ಕೆಳ ಜಾತೀಕರಣಕ್ಕೆ ಒಳಗಾಗಿ ಅಂಥ ಬಡವರ ಜೊತೆ ಇರುವವರು ಎಂಬುದನ್ನು ಸೂಚಿಸಿದ್ದಾರೆ.

"ಅಗಲೂ ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು
ಹೋಗೆಂದಡೆ ಹೋಗವು
ನಾಯಿಗಿಂತ ಕರಕಷ್ಟ ಕೆಲವು ದೈವಂಗಳು
ತಾವೇನ ಕೊಡುವವು ಕೂಡಲ ಸಂಗಮದೇವಾ"

ಎಂದು ಇಂಥ ದೇವರುಗಳನ್ನೆಲ್ಲ ಬಡವರ ಮನ ಮನ ಮತ್ತು ಆನೆಗಳಿಂದ ಆಚೆ ನೂಕುವ ಪ್ರಯತ್ನ ಮಾಡುತ್ತಾರೆ. ಏಕೋಭಾವದಿಂದ ಪರಮಾತ್ಮನನ್ನು ಅರಿತುಕೊಂಡ ನಡೆಯುವರು ಖಂಡಿತವಾಗಿಯೂ ಎಲ್ಲ ಜಂಜಡಗಳಿಂದ ಹೊರಬರುತ್ತಾರೆ ಎಂಬುದರ ಮನವರಿಕೆ ಮಾಡಿಕೊಡುತ್ತಾರೆ. ಅವರ ಕೂಡಲಸಂಗಮದೇವರು ಎಲ್ಲರ ದೇವರಾಗಿದ್ದಾನೆ. ಸಮಾಜದ ಎಲ್ಲ ಸ್ತರಗಳಿಂದ ಜನ ಅವರಲ್ಲಿಗೆ ಬಂದರು. ಅವರ ಶರಣ ಸಂಕುಲದ ಭಾಗವಾದರು. ಆದರೆ ಅವರಲ್ಲೇನೆಕರು ತಮ್ಮ ಸಾಂಪ್ರದಾಯಿಕ ನಡೆವಳಿಕೆಗಳಿಂದ ಹೊರಬರುವ ಸಾಮರ್ಥ್ಯವನ್ನು ತೋರಲಿಲ್ಲ.

ಬಸವಣ್ಣನವರು ಹಂಗುದೊರೆದು ಹೊಸದೇವರು, ಹೊಸ ಸಮಾಜ, ಹೊಸ ತಾತ್ತ್ವಿಕ ಚಿಂತನೆ, ಹೊಸ ಆರ್ಥಿಕ ನೀತಿ ಮತ್ತು ಹೊಸ ಜೀವನ ವಿಧಾನದೊಂದಿಗೆ ಮುನ್ನಡೆದರು. ಆದರೆ ಜನಸಮುದಾಯ ಅವರ ಶಕ್ತಿಯನ್ನು ಅರಿತರೂ ಅವರ ಶಕ್ತಿಯನ್ನು ಅರಿತರೂ ಅವರ ಹೆಜ್ಜೆಯೊಡನೆ ಹೆಜ್ಜೆ ಹಾಕುವಲ್ಲಿ ಸೋತಿತು. ಈ

ಕಾರಣದಿಂದ ಶರಣರು ಬಹಳ ಕಷ್ಟಪಡಬೇಕಾಯಿತು. ಅವರೆಲ್ಲ ಧನಶಕ್ತಿಯಿಂದ ಬದುಕಿದವರಲ್ಲ, ಆತ್ಮಶಕ್ತಿಯಿಂದ ಬದುಕಿದರು.

ಜನರನ್ನು ಗೊಡ್ಡು ಸಂಪ್ರದಾಯ ಮತ್ತು ಮೂಢನಂಬಿಕೆಗಳಿಂದ ಪಾರುಮಾಡಿ ವೈಚಾರಿಕ ನೆಲೆಯಲ್ಲಿ ಮುನ್ನಡೆಸುವ ಬಗ್ಗೆ ಬಸವಣ್ಣನವರು ಸದಾ ಚಿಂತನೆ ಮಾಡಿದ್ದಾರೆ.

"ಹಾಲು ಮೊರಡಿಗಳಲ್ಲಿ ಊರ ದಾರಿಗಳಲ್ಲಿ
ಕೆರೆ ಬಾವಿ ಹೊಗಿಡು ಮರಂಗಳಲ್ಲಿ
ಗ್ರಾಮಮಧ್ಯಂಗಳಲ್ಲಿ ಜಲಪಥ ಪಟ್ಟಣಪ್ರದೇಶದಲ್ಲಿ
ಹಿರಿಯೊಲದ ಮರದಲ್ಲಿ ಮನೆಯ ಮಾಡಿ,
ಕರೆಮೆಮ್ಮೆಯ ಹಸುಗೂಸು ಬಸುರಿ ಬಾಣಂತಿ
ಕುಮಾರಿ ಕೊಡಗೂಸು ಎಂಬುವರ ಹಿಡಿದುಂಟ, ತಿರಿದುಂಟ
ಮಾರಯ್ಯ, ಬೀರಯ್ಯ, ಕೇಚರಗಾವಿಲ ಅಂತರಬೆಂತರ
ಕಾಳಯ್ಯ, ಮಾರಯ್ಯ, ಮೊಳಯ್ಯ, ಕೇತಯ್ಯಗಳೆಂಬ ನೂರು ಮಡಕೆಗೆ
ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ದಟಿ ಸಾಲದೆ?

ಎಂದು ಬಸವಣ್ಣನವರು ಪ್ರಶ್ನಿಸುತ್ತಾರೆ. ಇಂಥ ಕಿರಿಕಿರಿಯ ದೇವರುಗಳೆಂಬ ಮಡಕೆಗಳನ್ನು ಕೂಡಲ ಸಂಗಮದೇವರೆಂಬ ಜ್ಞಾನದ ಬಡಿಗೆಯಿಂದ ಒಡೆದು ಹಾಕಲು ಸೂಚಿಸುತ್ತಾರೆ. ಇಂಥ ದೇವರುಗಳಿಂದ ಬಿಡುಗಡೆ ಹೊಂದಿದಾಗ ಮಾತ್ರ ನಿಜವಾದ ದೇವರ 'ದರ್ಶನ'ವಾಗುವುದು.

ಬಡವರು ಇಂಥ ದೇವರ ಸೇವೆ ಮಾಡುವುದರಲ್ಲೇ ಧನವನ್ನೆಲ್ಲ ಸವೆಸುತ್ತಾರೆ. ಭಯದಲ್ಲಿ ಲಯವಾಗುತ್ತಾರೆ. ತಮ್ಮ ಮತ್ತು ತಮ್ಮ ಮಕ್ಕಳ ಭವಿಷ್ಯವನ್ನು ಇಂಥ ದೇವರುಗಳಿಂದ ಹಾಳುಮಾಡಿಕೊಳ್ಳುತ್ತಾರೆ. ಆದರೆ ಬಸವಣ್ಣನವರ ದೇವರು ಏನನ್ನೂ ಬಯಸುವುದಿಲ್ಲ. "ಕುರಿ ಬೇಡ, ಮರಿಬೇಡ, ಬರಿಯ ಪತ್ರೆಯ ತಂದು ಪೂಜಿಸು ನಮ್ಮ ಕೂಡಲ ಸಂಗಮದೇವನ" ಎಂದು ದೇವಾರಾಧನೆಯ ಸರಳಮಾರ್ಗವನ್ನು ತೋರಿಸಿಕೊಡುತ್ತಾರೆ. ಬಡವರು ಕಷ್ಟಪಟ್ಟು ದೇವರ ಕಾರ್ಯಗಳನ್ನು ಮಾಡಿದರೆ ಶ್ರೀಮಂತರನೇಕರು ಅಹಂಕಾರದಿಂದ ದೇವರ ಕೆಲಸಮಾಡುತ್ತಾರೆ.

"ಹತ್ತು ಮತ್ತರ ಭೂಮಿ, ಭತ್ತದ ಹಯನು, ನಂದಾದೀವಿಗೆಯ
ನಡೆಸಿರುವೆಂಬುವರ ಮುಖವ ನೋಡಲಾಗದು

ಅವರ ನುಡಿಯ ಕೇಳಲಾಗದು

ಅಂಡಜ, ಸ್ವೇದಜ, ಉದ್ಭಿಜ, ಜರಾಯುಜವೆಂಬ ಪ್ರಾಣಿಗಳಿಗೆ

ಭವಿತವ್ಯವ ಕೊಟ್ಟವರಾರೋ?

ಒಡೆಯರಿಗೆ ಉಂಡಲಿಗೆಯ ಮುರಿದಿಕ್ಕಿದಂತೆ

ಎನ್ನಿಂದಲೇ ಆಯಿತ್ತು. ಎನ್ನಿಂದಲೇ ಆಯಿತ್ತು, ಎನ್ನಿಂದಲೇ
ಹೋಯಿತ್ತು ಎಂಬುವನ ಬಾಯಲ್ಲಿ

ಮೆಟ್ಟಿ ಹುಡಿಯ ಹೊಯ್ಯವೆ ಮೊಚನೆ

ಕೂಸಲ ಸಂಗಮದೇವ"

ಎಂದು ಅಹಂಕಾರದ ಭಕ್ತಿಯನ್ನು ಅಲ್ಲಗಳೆಯುತ್ತಾರೆ. ಅಹಂಕಾರ ಮತ್ತು ಭಯದಿಂದ ದೇವರನ್ನು ಪೂಜಿಸುವ ಅವಶ್ಯಕತೆ ಇಲ್ಲ ಎಂದು ಬಸವಣ್ಣನವರು ತಿಳಿಸಿದ್ದಾರೆ. ಭಕ್ತಿಯು ಅಂತಃಕರಣದಿಂದ ತುಂಬಿರಬೇಕು ಮತ್ತು ದಾಸೋಹಭಾವ-ದಿಂದ ಕೂಡಿರಬೇಕು.

"ಬಯಲು ರೂಪ ಮಾಡುವಾತನೆ ಶರಣನು,

ಆ ರೂಪ ಬಯಲು ಮಾಡಬಲ್ಲಾತನೆ ಲಿಂಗಾನುಭವಿ,

ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ?

ಆ ರೂಪ ಬಯಲು ಮಾಡಲರಿಯಿದಿದ್ದಡೆ ಎಂತು ಲಿಂಗಾನುಭಾವಿಯೆಂಬೆ?

ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರವುಂಟೆ

ಕೂಡಲಸಂಗಮ ದೇವಾ"

ಇಂಥ ಶರಣರು ಬಯಲಿಂಗೆ 'ಇಷ್ಟ'ದ ರೂಪಕೊಡುತ್ತಾರೆ. ಆ ಮೂಲಕ ಬಯಲನ್ನು ಅನುಭಾವಿಸುತ್ತಾರೆ. ನಂತರ ಅಲ್ಲಿಗೇ ನಿಲ್ಲದೆ ಆ ಇಷ್ಟಲಿಂಗದ ರೂಪವನ್ನು ಜಂಗಮಲಿಂಗವೆಂಬ ಬಯಲಲ್ಲಿ ಲೀನಗೊಳಿಸುತ್ತಾರೆ. ಹೀಗೆ ಒಳಹೊರಗನ್ನು ಒಂದಾಗಿಸುತ್ತಾರೆ. ಇಂಥ ಒಂದುತನದ ಮೂಲವನ್ನು ತಿಳಿಸುವುದರ ಮೂಲಕ ಬಸವಣ್ಣನವರು ಎಲ್ಲ ರೀತಿಯ ಭೇದಭಾವಗಳನ್ನು ಅಳಿಸಿ ಸರ್ವಸಮಾನತೆಯ ದೀಪವನ್ನು ಜನಮನದಲ್ಲಿ ಬೆಳಗಿಸಲೆತ್ನಿಸುವ ಕ್ರಮ ಅನುಪಮವಾಗಿವೆ. ಇಂಥ ನೈತಿಕ ಪ್ರಜ್ಞೆಯಿಂದಾಗಿ ಅವರು ಸದಾ ಮಹಿಳೆಯ ಪರ, ದುಡಿಯುವವರ ಪರ, ಬಸವರ ಪರ, ಅಸ್ಪೃಶ್ಯರ ಪರ ಮತ್ತು ಅನೈತಿಕ ಸಂಬಂಧದಿಂದ ಹುಟ್ಟಿದವರ ಪರ ನಿಲ್ಲುತ್ತಾರೆ.

ಬಸವಣ್ಣನವರು ಕಾಯಕ ಜೀವಿಗಳಿಗೆ ಇಷ್ಟಲಿಂಗವನ್ನು ಕೊಟ್ಟರು. ವರ್ಣ ಮತ್ತು ಜಾತಿ ಸಂಕರದಿಂದಾದ ಚಲನಶೀಲತೆಯಿಂದಾಗಿ ಹೊಸ ಮಾನವೀಯ

ಸಮಾಜವೊಂದರ ಉದಯವಾಗತೊಡಗಿತು. ಈ ಸಂದರ್ಭದಲ್ಲಿ ಇಷ್ಟಲಿಂಗ ಇಡೀ ಕಾಯಕಜೀವಿಗಾಗ, ಆತ್ಮಗೌರವದ ಸಂಕೇತವಾಗಿ ಮತ್ತು ಎಲ್ಲ ಬಂಧನಗಳಿಂದ ಮುಕ್ತವಾಗಿ ಸ್ವಾತಂತ್ರಮಾನವನ ಆತ್ಮಶಕ್ತಿಯ ದ್ಯೋತಕವಾಗಿ ರಾರಾಜಿಸಿತು. ಬಸವಣ್ಣನವರು ಪರ್ಯಾಯ ಸಮಾಜಕ್ಕೆ ಬೇಕಾದ ಎಲ್ಲ ರೀತಿಯ ವ್ಯವಸ್ಥೆಯನ್ನು ಮಾಡಿದರು.

ನವ ಸಮಾಜವನ್ನು ಉಳಿಸಿ ಬೆಳೆಸುವುದಕ್ಕಾಗಿ ಶಿವನಿಧಿಯನ್ನು ಸ್ಥಾಪಿಸುವುದು, ಅವಶ್ಯಕವಾಗಿತ್ತು. ಕಾಯಕ ಜೀವಿಗಳಲ್ಲಿ ಸಂಪತ್ತಿನ ಕೊರತೆ ಇತ್ತು. ಅವರು ಸಂಪತ್ತಿನ ಸಂಚಯ ಮಾಡಿಕೊಳ್ಳಲು ಸಾಧ್ಯವಾಗದಂಥ ಆರ್ಥಿಕ ಹಿಡಿತದಿಂದ ಕೂಡಿದ ಉತ್ಪಾದನಾ ಮತ್ತು ವಿತರಣಾ ವ್ಯವಸ್ಥೆ ಇತ್ತು. ಆ ಕಾಯಕಜೀವಿಗಳಿಗಾಗಿ ಶಿವನಿಧಿಯನ್ನು ಸ್ಥಾಪಿಸುವುದರ ಮೂಲಕ ಅವರ ಆರ್ಥಿಕ ಸ್ಥಿರತೆಯನ್ನು ಸಾಧಿಸುವ ಬಗ್ಗೆ ಬಸವಣ್ಣನವರು ಯೋಚನೆ ರೂಪಿಸಿದ್ದರು ಎಂಬುದರ ಬಗ್ಗೆ ಅವರ ಅನೇಕ ವಚನಗಳಿಂದ ತಿಳಿದುಬರುವುದು.

> 'ಕುಲಗೆಟ್ಟಡೆ ಕೆಡಬಹುದಲ್ಲದೆ ಛಲಗೆಡಬಾರದು'
> ಛಲಗೆಟ್ಟಡೆ ಕೆಡಬಹುದಲ್ಲದೆ ಭಕ್ತಿಯ ಅನು ಕೆಡಬಾರದು;
> ಭಕ್ತಿಯ ಅನು ಕೆಟ್ಟಡೆ ಕೆಡಬಹುದಲ್ಲದೆ ಆಯತ ಕೆಡಬಾರದು'
> ಆಯತ ಕೆಟ್ಟಡೆ ಕೆಡಬಹುದಲ್ಲದೆ ಸ್ವಾಯತ ಕೆಡಬಾರದು!
> ಎಲೆ, ಕೂಡಲಸಂಗಮದೇವಾ, ಮುನ್ನ ಮುಟ್ಟಿದೆ ಮುಟ್ಟಿತ್ತು
> ಇನ್ನೂ ಮುಟ್ಟಿದೆನಾದಡೆ ನಿಮ್ಮ ರಾಣಿವಾಸದಾಣೆ!

ಆಂತರಿಕ ಲಿಂಗಾನುಭವದ ಹಂತದಲ್ಲಿ ಶರಣನಿದ್ದಾಗ ಕುಲ ಛಲ ಮೊದಲಾದುವೆಲ್ಲಾ ಗೌಣವಾಗುತ್ತವೆ. ಕುಲ, ಛಲ, ಭಕ್ತಿಯ, ಒಪ್ಪು-ಓರಣ, ಅನು, ಆಯತ ಇವು ಕೆಡಬಹುದು ಎನ್ನುತ್ತಾರೆ. ಅಂದರೆ ಇವೆಲ್ಲಾ ತಮಗೆ ತಾವೇ ಇಲ್ಲ. ಇವು ಒಂದರೊಳಗೊಂದು ಅಡಿಗ ಮನಸ್ಸು ಅಂತರ್ಮುಖವಾಗಿ ಪ್ರಾಣಲಿಂಗಾನು ಸಂಧಾನದಲ್ಲಿ ಮಗ್ನವಾಗಬೇಕು ಎನ್ನುವ ಅರ್ಥದಲ್ಲಿ ಇದನ್ನು ತೆಗೆದುಕೊಳ್ಳಬೇಕು. 'ಆಯತ' ಎಂದರೆ ಇಷ್ಟಲಿಂಗ ಸಂಬಂಧ ಸ್ವಾಯತ ಎಂದರೆ ಪ್ರಾಣಲಿಂಗ ಸಂಬಂಧ ಆಯತವು ಸ್ವಾಯತದಲ್ಲಿ ತೊಡಗಿ ಸನ್ನಿಹಿತ ಎಂದರೆ ಭಾವಲಿಂಗದಲ್ಲಿ ನಿಲ್ಲಬೇಕೆಂಬುದನ್ನು ಇಲ್ಲಿ ಗಮನಿಸಬೆಕು. ಸ್ವಯತ ಸನ್ನಿಹಿತ ಸ್ಥಿತಿಗೆ ಬರುವುದಕ್ಕೆ ಮೊದಲು ಮನಸ್ಸು ಏನು ಮುಟ್ಟಿತೊ ಅಷ್ಟೇ ಇಲ್ಲಿಗೆ ಬಂದ ಮೇಲೆ ಮನಸ್ಸು

ಅಂತರ್ಮುಖವಾದಾಗ ಕುಲಛಲಾಧಿಗಳ ಸೊಂಕು ಇರುವುದಿಲ್ಲ ಎಂದಿದಾರೆ. ಬಸವಣ್ಣನವರ ಧೋರಣೆಯ ಮೂಲಭೂತವಾಗಿ ಶ್ರೇಣೀಕೃತ ನೈತಿಕಮೌಲ್ಯಗಳನ್ನು ಹೊಂದಿಯೇ ಹಿಂದೂ ಧಾರ್ಮಿಕ ವ್ಯವಸ್ಥೆ ತಳಹದಿಯ ಮೇಲೆ ಇದ್ದಂಥ ವರ್ಗಗಳಿಗೆ ಒಟ್ಟು ಅವ್ಯವಸ್ಥೆಯ ಕೆಟ್ಟ ಅಂಶಗಳನ್ನು ಎತ್ತಿತೋರಿಸಬೇಕೆನ್ನುವುದೇ ಆಗಿದೆ. ಆದ್ದರಿಂದಲೇ ವೈದಿಕ ಆಚರಣೆಗಳ ಟೀಕೆಯೂ ಇವರ ವಚನಗಳಲ್ಲಿ ಪೂರಕವಾಗಿಯೇ ಬರುತ್ತದೆ.

ಹೋಮದ ನೆವದಲ್ಲಿ ಹೋತನು ಕೊಂದ ತಿಂಬ
ಅನಾಮಿಕನೊಡನಾಡಿ ಗೆಲಿವುದೇನು?
ಕೂಡಲಸಂಗಮದೇವಾ

ಕೆಚ್ಚು ದೈವವೆಂದು ಹವಿಯಿನ್ನಿಕ್ಕುವ ಹಾರುವರ ಮನೆಯಲು
ಕಿಚ್ಚಿಟ್ಟು ಸುಡುವಾಗ
ಬಚ್ಚಲ ನೀರ, ಬೀದಿಯ ದೂಳ ಹೊಯ್ದು
ಬೊಬ್ಬಿಟ್ಟೆಲ್ಲರ ಕರೆವರಯ್ಯಾ
ಕೂಡಲಸಂಗಮದೇವಾ
ವಂದನೆಯ ಮರೆದು ನಿಂದಿಸುತ್ತಿದ್ದರು

ಈ ಎನ್ನುವ ವಚನಗಳಲ್ಲಿ ಈ ಆಚರಣೆಗಳು ಅರ್ಥಹೀನತೆಯನ್ನು ಎತ್ತಿಹಿಡಿಯಲಾಗಿದೆ. ಬಸವಣ್ಣನವರು ಧಾರ್ಮಿಕ ವ್ಯವಸ್ಥೆ ಮೂಲವನ್ನೆ ಹಿಡಿದು ಅಲ್ಲಾಡಿಸಿದರು ಧರ್ಮವನ್ನೇ ಅವರು ನಿರಾಕರಿಸಲಿಲ್ಲ. ಅದರ ಮೇಲೆ ದಟ್ಟವಾಗಿ ಬೆಳೆದು ಪರೋಪಜೀವಿ ಬಂಧನಗಳಂತಿದ್ದ ಸಂಪ್ರದಾಯಗಳನ್ನು ಕತ್ತಿರಿಸಿ ಹಾಕಿದರು. ಅತ್ಯಂತ ವೈಚಾರಿಕಾವದ ವಿಚಾರನಿಷ್ಠೆಯಿಂದ ಅವುಗಳನ್ನು ಕಟುಪರೀಕ್ಷೆಗೆ ಒಳಪಡಿಸಿದರು. ಗಟ್ಟಿಯಾದವುಗಳನ್ನು ಉಳಿಸಿಕೊಂಡು ತಮ್ಮ ಅನುಭಾವದಿಂದ ಅವುಗಳಿಗೆ ಹೊಸ ಹೊಳಪನ್ನು ಕೊಟ್ಟರು, ಜೊಳ್ಳುಗಳನ್ನು ಜಾಲಾಡಿ ಜೊಂಡುಗಳನ್ನು ಕಿತ್ತೆಸೆದರು. ಅದರಲ್ಲೂ ಮುಖ್ಯವಾಗಿ ಯಜ್ಞ, ಯಾಗಾದಿಗಳು ಮತ್ತು ಅದರ ಸುತ್ತ ಹರಡಿದ್ದ ಶೋಷಣೆಯ ಜಾಲಗಳು ಮೊದಲ ಕರ್ಮಾಂಲಜ್ಜಕ್ಕಿಂತ ಜ್ಞಾನದ ಮೂಲಕ ಕೈಗೊಳ್ಳುವ ಅನುಸಂಧಾನವೇ ಶ್ರೇಷ್ಠವೆಂದು ಉಪನಿಷತ್ತುಗಳು ಹೇಳಿದ್ದರೂ ಕರ್ಮಗಳ ಪ್ರಾಬಲ್ಯ ನಿಂತಿರಲಿಲ್ಲ.

ಧರ್ಮದ ಹೆಸರಿನಲ್ಲಿ ಉತ್ತಮರೆಂದು ಹೇಳಿಕೊಂಡು ಪಶುಬಲಿ ಕೊಡುವುದು ಬಸವಣ್ಣನವರಿಗೆ ಅಸಹನೆಯನ್ನುಂಟು ಮಾಡಿತು. ಅದನ್ನು ಶಾಸ್ತ್ರಾಧಾರಗಳಿಂದ

ಸಾರೋದ್ಧಾರವಗಿ ಬೆಳಸಿಕೊಂಡು ಬರುತ್ತಿರುವುದನ್ನು ಕಂಡು ಅವರು ಕೆರಳಿದರು. ವೇದಶಾಸ್ತ್ರಗಳಲ್ಲಿ ಹೇಳಿರುವ ಹಿಮಸಾಚಾರದ ಮಾರ್ಗಗಳನ್ನು ಬಸವಣ್ಣನವರು ಕಟುವಾಗಿ ಖಂಡಿಸುತ್ತಾರೆ.

"ಶುದ್ಧಾತ್ಮ ಪರಮಾತ್ಮಾರಿಬ್ಬರೂ ಬಂದು ರತ್ನಕ್ಕೆ
ಹೆಣಗಾಟವನಾಡಿಹರು
ಅವರ ಹೆಣಗಾಟವ ನೋಡಿ ಆ ರತ್ನವ ಸೆಳೆದುಕೊಂಡಡೆ
ಕೂಡಲಸಂಗಮದೇವಂಗಾರೋಗಣೆಯಾಯಿತ್ತು."

ಶುದ್ಧಾತ್ಮ ಎಂದರೆ ದ್ವೈತಿಗಳೆಂದೂ ಪರಮಾತ್ಮ ಎಂದರೆ ಅದ್ವೇತಿಗಳೆಂದೂ ಇಟ್ಟುಕೊಂಡು ಇವರಿಬ್ಬರೂ ಒಂದು ರತ್ನಕ್ಕಾಗಿ ಅಂದರೆ ಸಾಕ್ಷಾತ್ಕಾರಕ್ಕಾಗಿ ಹೆಣಗಾಡುತ್ತಿದ್ದಾರೆ ಎಂದು ಒಂದು ರೀತಿಯಲ್ಲಿ ಅರ್ಥೈಸಬಹುದು. ಇದನ್ನು ಇನ್ನೊಂದು ರೀತಿಯಲ್ಲಿಯೂ ನೋಡಬಹುದು. ಶುದ್ಧಾತ್ಮನೆಂದರೆ ಶರಣ. ಪರಮಾತ್ಮನೆಂದರೆ ಕೂಡಲಸಂಗಮದೇವ ಅಥವಾ ಶಿವ. ಇವರ ಮಧ್ಯದಲ್ಲಿ ಆನಂದ ಭಕ್ತಿಯೇ ರತ್ನ ಅದನ್ನು ಇಬ್ಬರೂ ಪ್ರೀತಿಸುತ್ತಾರೆ. ಅದನ್ನು ಕೂಡಲಸಂಗಮದೇವ ಸೆಳೆದುಕೊಂಡರೆ ಭಕ್ತನೇ ಆರೋಗಣಿ. ಆತನಿಗೆ ಆರೋಗಣೆಯಾಗುತ್ತಾರೆ. ಭಕ್ತಿ ಬೇರೆಯಲ್ಲ; ಭಕ್ತ ಬೇರೆಯಲ್ಲ. ಶಿವನು ಭಕ್ತಿಯನ್ನು ಸೆಳೆದುಕೊಂಡರೆ ಭಕ್ತ ಆತನಿಗೆ ಸಮರ್ಪಿತನಾಗುತ್ತಾನೆ. ಭಕ್ತ ಹಾಗೂ ಪರಮಾತ್ಮರಲ್ಲಿ ಭಕ್ತಿರತ್ನಕ್ಕಾಗಿ ಹೆಣಗಾಟ ನಡೆದಿರುವುದನ್ನು ಇಲ್ಲಿ ಕಾಣಬಹುದು.

"ಎಲ್ಲರ ಗಂಡರು ಬೇಂಟೆಯ ಹೋದರು;
ನೀನೇಕೆ ಹೋಗೆ, ಎಲೆ ಗಂಡನೆ?
ಸತ್ತುದ ತಾರದಿರು ಕೈಮುಟ್ಟಿಕೊಲ್ಲದಿರು
ಅಡಗಿಲ್ಲದೆ ಮನೆಗೆ ಬಾರದಿರು!
ದೇವರ ಧರ್ಮದಲೊಂದು ಬೇಂಟೆ ದೊರಕೊಂಡಡೆ
ಕೂಡಲಸಂಗಮದೇವಂಗರ್ಪಿತವ ಮಾಡುವೆ ಎಲೆ ಗಂಡನೆ"

ಇದು ಜೀವಪುರುಷನಿಗೆ ವಿವೇಕವೆಂಬ ಸತಿ ಹೇಳಿರುವ ಮಾತು ಎಂದು ಇಟ್ಟುಕೊಳ್ಳಬಹುದು. "ಎಲ್ಲರ ಗಂಡರು ಎಂದರೆ ವಿವಿಧ ಧಾಮಿಕ ಪಂಥದ ಸಾಧಕರು. ಎಲ್ಲ ಸಾಧಕರೂ ಬೇಟೆಗೆ ಹೋಗಿದ್ದಾರೆ. ಇದು ಹೊರಗಿನ ಕಾಡಿನಲ್ಲಿ ನಡೆಯುವ ಬೇಟೆಯಲ್ಲ. ಈ ದೇಹದಲ್ಲಿ ಆಂತರಿಕವಾಗಿ ನಡೆಯುವ ಆಧ್ಯಾತ್ಮ ಸಾಧನೆ.

ನೀನೂ ಈ ಒಳಗಿನ ಬೇಟೆಗಾಗಿ ಹೋಗು" ಎಂದು ವಿವೇಕ ಸತಿ ಪತಿಯಾದ ಶರಣ ಮಾರ್ಗದ ಜೀವನಿಗೆ ಹೇಳುತ್ತಿದ್ದಾಳೆ. ಇದು ನಮ್ಮ ಸಾರಾ ಸಾರಾ ವಿವೇಚನಾಶಕ್ತಿ ನಮಗೆ ಕೊಡುವ ಎಚ್ಚರಿಕೆಯ ಮಾತು. ಎಲ್ಲ ಸಂತರೂ ಬೇಟೆಗೆ ಹೋಗಿದ್ದಾರೆ. ಸಾಧನೆಗೆ ತೊಡಗಿದ್ದಾರೆ. ಎಲೈ ಜೀವಪುರುಷನೇ ನೀನೂ ಹೋಗು ಎಂದು ಆ ವಾಣಿ ಹೇಳುತ್ತದೆ. ಇಲ್ಲಿ ಹೇಳುವ ಮೂರು ಮಾತುಗಳು ಭಕ್ತಿಯ ಲಕ್ಷಣವನ್ನು ಸೂಚಿಸುವಂತೆ ತೋರುತ್ತದೆ. 'ಸತ್ತುದ ತಾರದಿರು' ಅಂದರೆ ಭಕ್ತಿ ಜಡವಾಗಬಾರದು. ಚೈತನ್ಯಶೀಲವಾಗಿರಬೇಕು. "ಕೈಮುಟ್ಟಿ ಕೊಲ್ಲದಿರು ಎಂದರೆ ಅದು ಲೌಕಿಕ ಸ್ಪರ್ಶದಿಂದ ಸದೋಷವಾಗಬಾರದು 'ಮಾಂಸವಿಲ್ಲದೆ ಮನೆಗೆ ಬರಬೇಡ' ಅಂದರೆ ಆ ಭಕ್ತಿ ಸತ್ವಪೂರ್ಣವಾಗಿರಬೇಕು. ಸತ್ಯವಿಲ್ಲದ ನಿಸ್ಸಾರ ಭಕ್ತಿಯಿಂದ ಸಾಧನೆಗೆ ತೊಡಗಬೇಡ ಎಂದು ಭಕ್ತಿಯ ಮೂರು ಲಕ್ಷಣಗಳನ್ನು ಈ ಮೂರು ಮಾತುಗಳು ಸೂಚಿಸುತ್ತವೆ. ಈ ಭಕ್ತಿ ದೇವದರ್ಮಕ್ಕೆ ದೇವನು ಪ್ರೀತಿಸುವ ಧರ್ಮಕ್ಕೆ ಸೇವೆಗೆ ಸಲ್ಲುವಂತಿರಬೇಕು. ಇಂತಹ ಭಕ್ತಿಯನ್ನು ನೀನು ತಂದರೆ ಕೈಕೊಂಡರೆ ಅದನ್ನು ಕೂಡಲಸಂಗಮದೇವನಿಗೆ ಅರ್ಪಿಸುತ್ತೇನೆ. ಆಗ ಕೂಡಲಸಂಗನ ಪ್ರಸಾದವನ್ನು ಸೇವಿಸಿ ನೀನು ಕೃತಾರ್ಥನಾಗಿ ಬಿಡುತ್ತೀಯೆ. ಆತನಲ್ಲಿ ಒಂದಾಗಿ ಬೆರೆತು ಹೋಗುತ್ತೀಯೆ. ಹೀಗೆ ಶರಣ ಸಾಧನೆಯ ಭಕ್ತಿ ನಿಲುವನ್ನು ಬಹಳ ಅರ್ಥಗರ್ಭಿತವಾಗಿ ಇಲ್ಲಿ ಹೇಳಿದ್ದಾರೆ.

ಪೂಜೆಯುಳ್ಳನ್ನಬರ ಲಿಂಗವ ಹಾಡಿದೆ;
ಮಾಟವುಳ್ಳನ್ನಬರ ಜಂಗಮವ ಹಾಡಿದೆ;
ಜಿಹ್ವೆಯುಳ್ಳನ್ನಬರ ಪ್ರಸಾದವ ಹಾಡಿದೆ
ಈ ತ್ರಿವಿಧ ನಾಸ್ತಿಯಾದ ಬಳಿಕ
ಎನ್ನನಾ ಹಾಡಿಕೊಂಡೆ, ಕಾಣಾ
ಕೂಡಲಸಂಗಮದೇವಾ

ಲಿಂಗಜಂಗಮ ಪ್ರಸಾದ ಈ ಮುರು ನಾಸ್ತಿಯಾಗಿ ತಮ್ಮನ್ನು ತಾವೇ ಹಾಡಿಕೊಳ್ಳುವ ಸಮರಸ್ಥಿತಿಯನ್ನು ಇಲ್ಲಿ ಕಾಣುತ್ತೇವೆ. ಪೂಜೆಯನ್ನು ಮಾಡಬೇಕೆನ್ನುವ ಭಾವ ಇರುವವರೆಗೂ ಲಿಂಗವನ್ನು ಪೂಜಿಸಿದೆ. ದಾಸೋಹ ಭಾವ ಇರುವವರೆಗೂ ಪ್ರಸಾದವನ್ನು ಹಾರೈಸಿದೆ. ಈ ಮೂರು ಮರೆಯಾದ ಮೇಲೆ ನನ್ನನ್ನು ನಾನೇ ಹಾಡಿಕೊಂಡೆ ಎನ್ನುವ ಮಾತು ಅರ್ಥವತ್ತಾಗಿದೆ. ಭಾವ ಇರುವವರೆಗೂ ಕ್ರಿಯೆ ಇರುತ್ತದೆ. ಆ ಭಾವಗಳೇ ಮರೆಯಾದ ಮೇಲೆ ಅಲ್ಲಿ ಏನೂ ಉಳಿಯುವುದಿಲ್ಲ.

ತನ್ನಷ್ಟಕ್ಕೆ ತಾನೇ ತನ್ನ ಪ್ರಜ್ಞೆಯಲ್ಲಿ ತಾನೇ ನೆಲೆಸುತ್ತಾನೆ. ಇದು ತನ್ನನ್ನು ತಾನೇ ಆರಾಧಿಸಿಕೊಳ್ಳುವ "ನ್ಯಾಯ ಸಮನಾದ ನಿಲುವು"

ಅನಾಯಾಸದಿಂದ ಮನೆಯ ಮಾಡಿ
ನಿರಾಯಾಸದಿಂದ ಪರಮಸುಖ
ರೂಪಿಸುವಲ್ಲಿ ರೂಪಾಧಿಕಃ ನೋಡುವಲ್ಲಿ ನೋಟ ಘನ!
ಇಂತಪ್ಪ ಸಹಜ ನಿಂಗಿಯ ನಿಲುವಿನ ಪರಿ!
ಉದಕದೊಳಗಣ ಬಿಂದು ಉದಯರತ್ನದಂತೆ
ಕೂಡಲಸಂಗನ ಶರಣರ ನಿಲವು

ಶರಣನ ಸಹಜ ನಿಲುವಿನ ಪರಿಯನ್ನು ಹೇಳುತ್ತಿದ್ದಾರೆ. ಆಯಾಸವಿಲ್ಲದ ಸಹಜತೆಯಿಂದ ಆನಂದ ಭಕ್ತಿಯಲ್ಲಿ ಮನೆಯ ಮಾಡಿ, ದೇವ ಸಾನಿಧ್ಯದಲ್ಲಿ ಪರಮಸುಖವನ್ನು ಅನುಭವಿಸುತ್ತಿದ್ದಾನೆ. ಆತನ ಮನಸ್ಸಿನಲ್ಲಿ ಲಿಂಗದ ರೂಪು ತುಂಬಿದೆ. ಆತನ ನೋಟದಲ್ಲಿ ಆ ಘನ ಪರವಸ್ತು ನೆಲೆಸಿದೆ. ಬಿಂದು ಉದಯರತ್ನವೆಂದರೆ ಸೂರ್ಯ ಪ್ರತಿಬಿಂಬ. ಅದು ನೀರೊಳಗಿರುವಂತೆ ಕಂಡರೂ ನೀರಿಗಂಟದು. ಹಾಗೆ ಶರಣ! ಮನ ಮಾಟ ನೋಟಗಳಲ್ಲಿದ್ದರೂ ಅವನು ಅವುಗಳಿಂದ ನಿರ್ಲಿಪ್ತ! 'ಉದಕದೊಳಗಣ ಬಿಂದು ಉದಯರತ್ನದಂತೆ' ಎಂಬ ಈ ಸುಂದರವಾದ ಸಾದೃಶ್ಯ ಶರಣನ ನಿಲುವನ್ನು ಅರ್ಥವತ್ತಾಗಿ ಚಿತ್ರಿಸುತ್ತದೆ.

'ಉಮಾಧಿನಾಥರು ಕೋಟಿ, ಪಂಚ ವಸ್ತ್ರರು ಕೋಟಿ
ನಂದಿವಾಹನರೊಂದು ಕೋಟಿ ನೊಡಯ್ಯಾ
ಸದಾಶಿವರೊಂದು ಕೋಟಿ ಗಂಗೆವಾಳುಕ ಸಮರುದ್ರರು
ಇವೆರೆಲ್ಲರೂ ಕೂಡಲಸಂಗನ ಸಾನಿಧ್ಯರಲ್ಲದೆ
ಸಮರಸವೇದ್ಯರೊಬ್ಬರೂ ಇಲ್ಲ'

ಶಿವಲೋಕದಲ್ಲಿರುವರೆಂದು ಹೇಳಲಾದ ಉಮಾಧಿನಾಥರು, ಪಂಚವಕ್ತ್ರರು, ನಂದಿವಾಹನರು ಮೊದಲಾದ ಗಣೇಶ್ವರರು ಕೋಟಿ ಕೋಟಿ ಸಂಖ್ಯೆಯಲ್ಲಿದ್ದರೂ ಅವರು ಶಿವನ ಬಳಿಯಲ್ಲಿರುವರೇ ಹೊರತು ಆತನೊಡನೆ ಸಾಮರಸ್ಯವನ್ನು ಪಡೆದವರಲ್ಲ. ಶಿವಲಾಂಛನವನ್ನು ಧರಿಸಿದ ಮಾತ್ರಕ್ಕೆ ಸಾಮರಸತೆ ಸಿದ್ಧಿಸುವುದಿಲ್ಲ–ವೆಂಬುದನ್ನು ಹೇಳುತ್ತಾ ನಿರಂತರ ಸಾಧನೆಯಿಂದ ಶರಣರು ಮಾತ್ರ ಅದನ್ನು ಕೈಗೂಡಿಸಿಕೊಳ್ಳಬಲ್ಲರೆಂದು ಸೂಚಿಸುತ್ತಾರೆ.

"ಬಯಲು ರೂಪ ಮಾಡಬಲ್ಲಾತನೆ ಶರಣನು!
ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭವಿ,
ಬಯಲು ರೂಪ ಮಾಡಲಱಿಯದಿದ್ದಡೆ ಎಂತ ಶರಣನೆಂಬೆ
ಈ ಉಭಯ ಒಂದಾದಡೆ ನಿಮ್ಮಲ್ಲಿ ತೆಱವುಂಟೆ
ಕೂಡಲಸಂಗಮದೇವಾ।"

ನಿರಾಕಾರವಾದ ಶಿವನನ್ನು ಇಷ್ಟಲಿಂಗರೂಪದಲ್ಲಿ ಕಾಣಬಲ್ಲವನು ಮತ್ತು ಇಷ್ಟಲಿಂಗ ರೂಪವಾದ ಶಿವನನ್ನು ಪ್ರಾಣಲಿಂಗ ಸ್ವರೂಪದಲ್ಲಿ ಬಯಲಾಗಿ ಕಾಣಬಲ್ಲವನು ಶರಣ. ಅವನು ಇಷ್ಟಲಿಂಗ ಪ್ರಾಣಲಿಂಗಗಳಲ್ಲಿ ಲೀನನಾದ ಲಿಂಗಾನುಭಾವಿ. ತನ್ನ ಭಾವದಲ್ಲಿ ಭಗವಂತನನ್ನು ಅಭಿವ್ಯಕ್ತಗೊಳಿಸುವುದು. ಮತ್ತು ಆ ಭಾವವನ್ನೇ ಬಯಲು ಮಾಡುವುದು. ಇವು ಶರಣನ ಸಾಧನೆಯ ಸ್ಪಂದನಗಳು. ಭಾವವೇ ನನ್ನ ರೂಪು. ಆ ಭಾವದಲ್ಲಿ ಆತನನ್ನು ಗ್ರಹಿಸುವುದು ಒಂದು ಹಂತ; ಅ ಭಾವವನ್ನು ಮೀರಿದ್ದು ಬಯಲು ಈ ಉಭಯ ಅಂದರೆ ರೂಪು ಮತ್ತು ಬಯಲು ಇವು ಒಂದರಲ್ಲಿ ಒಂದು ಅಡಗಬೇಕು. ಅದು ಲಿಂಗ ಅಂಗ ಒಂದಾಗಿ ನಿಂತ ಸ್ಥಿತಿ ಎರಡನ್ನು ಮೀರಿದ ನಿಲವು. ಅವುಗಳಲ್ಲಿ ಭಿನ್ನಭಾವನೆ ಇಲ್ಲ. ತೆರಹಿಲ್ಲ ಇಲ್ಲಿ ಒಳಹೊರಗು ಒಂದಾಗಿ ಶಿವನಲ್ಲಿ ಅವಿರಳ ಸಂಬಂಧವನ್ನು ಪಡೆಯುತ್ತಾರೆ ಶರಣ.

"ಜೀವಾತ್ಮ ಅಂತರಾತ್ಮನ ಸುದ್ದಿಯ ಬೆಸಗೊಂಬಡೆ ಹೇಳಿಂದೆ ಕೇಳಿ ಭೋ
ಹುಸಿಯ ಸಂಕಲೆಯಾಗಿದ್ದಲ್ಲಿ ಕಾದುಕೊಂಡಿದ್ದನೊಬ್ಬ
ಕಥೆ ಕನಸ ಮಾಡಿ ಹೇಳುತ್ತಿದ್ದನೊಬ್ಬ
ಪರಾಪರಕ್ಕೆ ಹೋಗಿ ಪರಮನ ಸುದ್ದಿಯ ಕೊಂಡಬರುತ್ತಿಪ್ಪ
ಅವರಿಬ್ಬರನೂ ಕೆಡೆಮೆಟ್ಟಿ ಹೋದಾಗ
ಲೋಕ ನಿರ್ಬುದ್ಧಿಗೊಂಡಿತ್ತು.
ಕೂಡಲಸಂಗಮದೇವಾ"

ಸಾಧನೆಯ ಕೊನೆಯಲ್ಲಿ ಜೀವಾತ್ಮ ಅಂತರಾತ್ಮ ಭಾವಗಳೆರಡೂ ಮರೆಯಾಗಬೇಕೆಂಬುದನ್ನು ಹೇಳುತ್ತಿದ್ದಾರೆ. ಜೀವಾತ್ಮನಿಗೆ ಈ ಹುಸಿ ಜಗತ್ತೆ ಒಂದು ಸಂಕಲೆಯಾಗಿ ಆತ ಅದನ್ನೇ ಕಾಯ್ದುಕೊಂಡಿದ್ದಾನೆ. ಅಂತರಾತ್ಮ ಕಥೆಯನ್ನೇ ಕನಸು ಮಾಡಿ ಹೇಳುತ್ತಾನೆ. ಅಂದರೆ ಆತ ಸತ್ಯವನ್ನು ಪೂರ್ಣ ಕಂಡಿಲ್ಲ. ಅದು ಕನಸಿನಂತೆ ಭಾಸವಾಗಿದೆ. ಪರ ಅಪರಾ ಎರಡೂ ಅಲ್ಲದ ಪರಾಪರವೆಂಬ ಮಧ್ಯಸ್ಥಿತಿಗೆ ಹೋಗಿ ಪರಮಸತ್ಯದ ಸುದ್ದಿಯನ್ನು ಅವನು ತಿಳಿದುಬರುತ್ತಾನೆ. ಆದರೆ ಅಸತ್ಯದ ಅಂತಿಮ

ಸ್ವರೂಪದ ಅರಿವು ಆತನಿಗೆ ಆಗಿಲ್ಲ. ಈ ಇಬ್ಬರನ್ನು ದಾಟಿ ಮುಂದೆ ಹೋದಾಗ ಆ ಪರವಸ್ತುವಿನ ಸಾಕ್ಷಾತ್ ಸ್ವರೂಪ ಅರಿವಾಗುತ್ತದೆ. ಜೀವಾತ್ಮಭಾವ, ಅಂತರಾತ್ಮಭಾವ ಎರಡು ಮರೆಯಾಗಿ ಹೊದಾಗ ಈ ಲೋಕಭಾವ ಮರೆಯಾಗುತ್ತದೆ. ಅಂತರಂಗದ ಸೂಕ್ತ ಪದರುಗಳನ್ನು ದಾಟಿದ ಅನುಭಾವದ ನಿಲುವನ್ನು ಇಲ್ಲಿ ಕಾಣುತ್ತೇವೆ.

"ಲಿಂಗವ ಪೂಜಿಸಿ ಫಲವೇನಯ್ಯಾ,
ಸಮರತಿ ಸಮಕಳೆ ಸಮಸುಖವನಱಿಯದನ್ನಕ್ಕ
ಲಿಂಗವ ಪೂಜಿಸಿ ಫಲವೇನಯ್ಯಾ
ಕೂಡಲಸಂಗಮದೇವರ ಪೂಜಿಸಿ
ನದಿಯೊಳಗೆ ನದಿ ಬೆರೆಸಿದಂತಾಗದನ್ನಕ್ಕ"

ಲಿಂಗವನ್ನು ಪೂಜಿಸಿ ಲಿಂಗವೇ ತಾನಾಗಬೇಕೆಂಬುದನ್ನೇ ಇಲ್ಲಿಯೂ ಮುಂದುವರೆಸಿದಾದ್ದಾರೆ. ಸಮರತಿ ಸಮಕಳೆ ಸಮಸುಖ ಲಿಂಗಪತಿಯಿಂದ ಶರಣಸತಿಗೆ ದೊರಕೊಳ್ಳುತ್ತದೆ. ಕೊನೆಯಲ್ಲಿ ಅದನ್ನೂ ಮೀರಿ ನದಿಯೊಳಗೆ ನದಿ ಸೇರಿದಂತೆ ಭಿನ್ನಭಾವವನ್ನು ಕಳೆದುಕೊಂಡ ಸಂಪೂರ್ಣ ಸಮರಭಾವದಲ್ಲಿ ಎರಡಳಿದು ಒಂದಾಗಿ ಜೀವ ಬೆರೆತು ಹೋಗುತ್ತದೆ.

"ಆ ಭಸ್ಮತಾಗಿ ಬ್ರಹ್ಮ ತನ್ನ ಕಪಾಲವಿಡಿದನು
ಗಣನಾಥನ ಐವತ್ತೆರಡು ಸರ ಹಱಿದುಬಿದ್ದವು
ಆ ಭಸ್ಮ ತಾಗಿ ಅಂಡಜ ಮುಗ್ದೆಯ ಮೂಱುಮಾಲೆ ಹಱಿದು ಬಿದ್ದವು
ನಾದಪ್ರಿಯ ನಂದಿಯ ನೇಱಿಕೊಂಡು
ಅತೀತನ ಮೇಲೆ ಆನಂದ ಸಿಂಹಾಸನವನ್ನಿಕ್ಕಿ ಕುಳಿತು
ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು"

ಆ ಭಸ್ಮ ಎಂದರೆ ಹಿಂದಿನ ವಚನಗಳಲ್ಲಿ ಹೇಳಿದ ಅಭೇದ ಜ್ಞಾನ. ಇದರ ಸ್ಪರ್ಶದಿಂದ ಸೃಷ್ಟಿಯಲ್ಲಿ ಕಾಲವಿಲ್ಲ. ಪ್ರಾಕೃತಿಕ ಗುಣಬಂಧನಗಳಿಲ್ಲ. ಅದನ್ನು "ಬ್ರಹ್ಮ ಕಪಾಲವಿಡಿದ" ಎನ್ನುವ ಮಾತಿನಲ್ಲಿ ಹೇಳಿದ್ದಾರೆ. ಐವತ್ತೆರಡು ಸರ ಹರಿದು ಬಿದ್ದವು. ಅಂದರೆ ಜೀವನ ವರ್ತನೆ ನಿವೃತ್ತಿಯಾಗಿ ಐವತ್ತೆರಡು ಅಕ್ಷರಗಳೆಂದ ಶುಲ್ಕಗಳು ಅಡಗಿದವು. ಮುಗ್ದೆಯ ಮೂರು ಮೂಲೆಹರಿದು ಬಿದ್ದವು. ಅಂದರೆ ವಿಶ್ವದ ಸೃಷ್ಟಿ ಸ್ಥಿತಿ ಸಂಹಾರಗಳು ನಷ್ಟವಾದುವು. ಲಿಂಗದಲ್ಲಿ ಎಕತ್ವ ಉಂಟಾಯಿತು. ಎಂಬ ಈ ಮಾತುಗಳಲ್ಲಿ ಹೇಳಿದ್ದಾರೆ. ಆತ ಈಗ ನಾದ ಬಿಂದು ಕಲೆಗಳನ್ನು ಮೀರಿದ ಆನಂದ

ಸಿಂಹಾಸನದ ಮೇಲೆ ಕುಳಿತ್ತಿದ್ದಾನೆ. ಆಗ ದೇವತ್ವ ಕೆಟ್ಟಿತ್ತು. ಅಂದರೆ ದೇವ ಎಂಬ ಕಲ್ಪನೆಯೂ ಇಲ್ಲವಾಗಿದೆ. ಹೀಗೆ ಶಬ್ದಗಳಿಂದ ಪ್ರಮಾಣಿಸಿಕೊಳ್ಳುವ ಲಿಂಗ ಜಂಗಮ ಪ್ರಸಾದ ಗಣತ್ವ ಇವುಗಳಿಲ್ಲ, ಸತ್ಯಾಶುದ್ಧವುಳ್ಳನಿಗೆ ಅಂದರೆ ಸಕಾರ ಸ್ವರೂಪನಿಗೆ ಧಾನ್ಯ, ಮೌನ, ಅನುಷ್ಠಾನ, ಷೋಡಶೋಪಚಾರ ಎಲ್ಲಾ ಉಂಟು ಆದಕಾರಣ ಇವೆಲ್ಲವೂ ಇರುವ ಸತ್ಯಾಶುದ್ಧ ಗುರುವಿಗೆ ಶರಣೆನ್ನುವುದಿಲ್ಲ. ಅಂತೆಯೇ ಸತ್ಯಶುದ್ಧ ಅಂದರೆ ನಿರಾಕಾರ ಸ್ವರೂಪಕ್ಕೂ ನಾನು ಶರಣೆನ್ನುವುದಿಲ್ಲ. ಏಕೆಂದರೆ ನನಗೆ ಸತ್ಯವೂ ಇಲ್ಲ ಅಸತ್ಯವೂ ಇಲ್ಲ ಎನ್ನುವ ಮಾತು ಅರ್ಥವತ್ತಾಗಿದೆ. ಸಾಕಾರ ಎಂದರೆ ಸ್ಥೂಲ ಆಕಾರ; ಇಂದ್ರಿಯ ಗೋಚರ ನಿರಾಕಾರ ಎಂದರೆ ಇಂದ್ರಿಯ ಗೋಚರವಲ್ಲದ ಅವ್ಯಕ್ತಸ್ಥಿತಿ ಲಿಂಗೈಕ್ಯನಾದವನು ಆ ಸ್ಥಿತಿಯಲ್ಲಿ ಈ ಎರಡನ್ನು ಮೀರಿ ನಿಲ್ಲುತ್ತಾನೆ.

> "ಜಲವ ನುಂಗಿತ್ತಯ್ಯಾ ಎನ್ನ ಕರವು
> ಪತ್ರೆಯ ನುಂಗಿತ್ತಯ್ಯಾ ಎನ್ನ ಶಿಖೆ;
> ಎನ್ನಯ ಮಂತ್ರ ಭಿನ್ನವಾಯಿತು
> ಇಂತೀ ದ್ವಿವಿಧ ಒಂದಾಗುವ ಮುನ್ನ
> ಕೂಡಲಸಂಗಮದೇವರು ಪೂಜೆಗೊಂಡರು"



ಲಿಂಗೈಕ್ಯ ಭಕ್ತನ ಅಕಂಡ ಪೂಜೆಯನ್ನು ಹೇಳುತ್ತಿದ್ದರೆ. ಇದು ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗದ ಹಂತಗಳಲ್ಲಿ ಬೆಳೆಯುತ್ತದೆ. "ಜಲದ ನುಂಗಿತ್ತಯ್ಯ ಎನ್ನ ಕರವು" ಇಲ್ಲಿ ಕರ ಎಂದರೆ ಕಾರ್ಯ ಪ್ರಧಾನ. ಇದು ಬಾಹ್ಯ ಶಿವಯೋಗ ಇದರಿಂದ ದೇಹ ಮರೆಯಾಗುತ್ತದೆ. ಎರಡನೆಯದು ಶಿಖೆ, ಇದು ಪತ್ರೆಯ ನುಂಗಿತ್ತು ಎಂದರೆ ಇದು ಅಂತಃ ಶಿವಯೋಗ, ಜ್ಞಾನ ಪ್ರಧಾನ ಇದರಿಂದ ಮನಸ್ಸು ಮರೆಯಾಗುತ್ತದೆ. ಮುಂದೆ 'ಎನ್ನಯಮಂತ್ರ ಭಿನ್ನವಾಯಿತ್ತು ಎನ್ನುತ್ತಾರೆ. ಅಂದರೆ ಶಿವಯೋಗ ಸಾಧನೆ ಇಲ್ಲಿಗೆ ನಿಂತುಹೋಗುತ್ತದೆ. ಬಾಹ್ಯಶಿವಯೋಗದಿಂದ ದೇಹಭಾವ ಮರೆಯಾಗುತ್ತದೆ. ಅಂತಶಿವಯೋಗದಿಂದ ಮನಸ್ಸು ಅಮನಸ್ಕನಾಗುತ್ತದೆ. ಈ ಎರಡೂ ಭಾವನೆಗಳು ಇರುವಾಗ ಕೂಡಲಸಂಗನ ಪೂಜೆ ನಡೆಯುತ್ತಿರುತ್ತದೆ. ಈ ಎರಡೂ ಒಂದಾದಾಗ ಅಲ್ಲಿ ಶಿವಯೋಗ ಸಾಧನೆ ಪೂರ್ಣಗೊಳ್ಳುತ್ತದೆ. ಅದು ನೀರು, ಪತ್ರೆ ಮಂತ್ರಗಳಿಲ್ಲದ ಅಖಂಡ ಪೂಜೆಯಲ್ಲಿ ಲೀನವಾಗುತ್ತದೆ. ಶಿವನು ನಿಶ್ಯಬ್ಧ ಬ್ರಹ್ಮನಾಗಿ ಅಲ್ಲಿ ನಾನು - ನೀನೆಂಬ ಉಭಯವಡಗಿತ್ತು ಎಂಬುದನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕು.

"ಶಿವ ಶಿವಾ ಮೂರ್ತಿಗೆ ಸತ್ಯಶುದ್ಧ ಉಂಟೆಂಬಿರಿ;
ಸತ್ಯ ಶುದ್ಧವುಳ್ಳವಂಗೆ ಗುರುವಿಲ್ಲ
ಸತ್ಯಶುದ್ಧವುಳ್ಳವಂತೆ ಲಿಂಗವಿಲ್ಲ
ಸತ್ಯಶುದ್ಧವುಳ್ಳವಂಗೆ ಜಂಗಮವಿಲ್ಲ
ಸತ್ಯಶುದ್ಧವುಳ್ಳವಂಗೆ ಪ್ರಸಾದವಿಲ್ಲ
ಸತ್ಯ-ಶುದ್ಧವುಳ್ಳವಂಗೆ ಗಣತ್ವವಿಲ್ಲ ಕೇಳಿರೆ
ಸತ್ಯಶುದ್ಧ ದೇವರಿಗೆ ಉಪಚಾರವುಂಟು
ಸತ್ಯಶುದ್ಧ ದೇವರಿಗೆ ಧ್ಯಾನ ಮೌನ ಅನುಷ್ಠಾನವುಂಟು
ಸತ್ಯಶುದ್ಧ ಉಪದೇಶಕ್ಕೆ ಜಪತಪ ಸಂಜೆ ಸಮಾಧಿ
ಹೋಮ ನೇಮ ನಿತ್ಯ ಅಷ್ಟ ವಿಧಾರ್ಚನೆ ಷೋಡಶೋಪಚಾರವುಮಟು
ಆದಕಾರಣ ಇಂತಪ್ಪ ಸತ್ಯಶುದ್ಧ ಗುರುವಿಂಗೆ ಶರಣೆನ್ನೆ
ಇಂತಪ್ಪ ಸತ್ಯಶುದ್ಧ ಲಿಂಗಕ್ಕೆ ಶರಣೆನ್ನಿ
ಇಂತಪ್ಪ ಸತ್ಯಶುದ್ಧ ಜಂಗಮೈ ಶರಣೆನ್ನಿ
ಇಂತಪ್ಪ ಸತ್ಯಶುದ್ಧ ಪ್ರಸಾದಕ್ಕೆ ಕೈಯಾನೆ
ಇವರೆಲ್ಲ ಬ್ರಹ್ಮನ ಮಕ್ಕಳು
ಎನಗೆ ಸತ್ಯವೂ ಇಲ್ಲ ಅಸತ್ಯವೂ ಇಲ್ಲ
ಅವ ಸಹಜವೂ ಇಲ್ಲದ ಲಿಂಗೈಕ್ಯ ಕಾಣಾ
ಕೂಡಲಸಂಗಮದೇವಾ"

ಲಿಂಗೈಕ್ಯಸ್ಥಿತಿಯಲ್ಲಿ ಶರಣ ಸಾಕರ ನಿರಾಕಾರಗಳೆರಡನ್ನೂ ಮೀರುತ್ತಾನೆಂಬುದನ್ನು ಇಲ್ಲಿ ಹೇಳುತ್ತಿರುವಂತೆ ತೋರುತ್ತದೆ. ಈ ವಚನದಲ್ಲಿ ಉದ್ದಕ್ಕೂ 'ಸತ್ಯಶುದ್ಧ' ಎನ್ನುವ ಮಾತು ಇದೆ. ಆದರೆ ಮೊದಲರ್ಧದಲ್ಲಿ ಬರುವುದನ್ನು ಸತ್ಯಶುದ್ಧವೆಂದೂ ಅನಂತರ ಬರುವುದನ್ನು ಸತ್ಯಾಶುದ್ಧವೆಂದೂ ಇಟ್ಟುಕೊಳ್ಳಬೇಕು. ಸತ್ಯಶುದ್ಧ ಅಮೂರ್ತ, ಸತ್ಯಶುದ್ಧ ಮೂರ್ತ ಸತ್ಯಶುದ್ಧವುಳ್ಳವರಿಗೆ ಅಂದರೆ ಅಮೂರ್ತ, ನಿರಾಕಾರಸ್ವರೂಪನಿಗೆ ಗುರು

"ಹಲಬರ ನುಂಗಿದ ಹಾವಿಂಗೆ ತಲೆ ಬಾಲವಿಲ್ಲ ನೋಡಾ
ಕೊಲುವುದು ತ್ರೆಜಗವೆಲ್ಲದ; ತನಗೆ ಬೇಙ್ ಪ್ರಳಯವಿಲ್ಲ
ನಾಕಡಿಯನ್ನೈದುವುದು, ಲೋಕದ ಕಡೆಯನೆ ಕಾಣ್ಬುದು;
ಸೂಕ್ಷ್ಮ ಪಥದಲ್ಲಿ ನಡೆವುದು; ತನಗೆ ಬೇಙ್ ಒಡಲಿಲ್ಲ
ಅಹವೆಂಬ ಗಾರುಡಿಗನ ನುಂಗಿತ್ತು
ಕೂಡಲಸಂಗನ ಶರಣರಲ್ಲದುಳಿದವರ!

ಇದು ಒಂದು ಬೆಡಗಿನ ವಷನ. ಪ್ರಾಚೀನ ವ್ಯಾಖ್ಯಾನಕಾರರು 'ತಲೆ ಬಾಲವಿಲ್ಲದ ಹಾವು' ಎಂಬುದನ್ನು ಮನೋಕುಂಡಲಿ ಎಂದು ಅರ್ಥೈಸಿದ್ದಾರೆ. ಈ ಮನೋಕುಂಡಲಿ ಎಂಬ ಸರ್ಪ, ದೇವ ದಾನವ ಮಾನವರುಗಳನ್ನೆಲ್ಲಾ, ನುಂಗಿದೆ. ಇದಕ್ಕೆ ತಲೆ, ಬಾಲ ಇಲ್ಲ 'ತಲೆ' ಎಂದರೆ ಜ್ಞಾನವೆಂಬ ಶಿರಸ್ಸು 'ಬಾಲ'ವೆಂದರೆ ಕ್ರಿಯೆ ಎಂಬ ಪುಚ್ಛ. ಈ ಎರಡೂ ಇದಕ್ಕಿಲ್ಲ. ಆದರೂ ಇದು ಮೂರುಲೋಕದ ದೇವ ದಾನವ ಮಾನವಾದಿಗಳನ್ನು ಜನನ ಮರಣಗಳ ಚಕ್ರಕ್ಕೆ ತಂದು ಕೊಲ್ಲುತ್ತಿದೆ. ಎಲ್ಲ ಆತ್ಮರುಗಳಿಗೆ ತಾನೇ ಚೈತನ್ಯವಾಗುವುದರಿಂದ ಇದಕ್ಕೆ ನಾಶವಿಲ್ಲ. ಇದು ಚತುಃಕರನಗಳೊಡನೆ ಕೂಡಿ ಚಲಿಸುತ್ತಿದೆ. ಲೋಕದ ಜೀವರುಗಳೊಡನೆ ಬೆರೆತು ತಾನೂ ಲೋಕ ಕ್ರಿಯೆಯಲ್ಲಿ ತೊಡಗಿವೆ. ಆದರೂ ಸೂಕ್ತವಾದ ಮನೋಮಾರ್ಗದಲ್ಲಿ ಚಲಿಸುತ್ತದೆ. ಇದಕ್ಕೆ ಬೇರೆ ದೇಹವಿಲ್ಲ. ಎಲ್ಲ ಜೀವರುಗಳ ದೇಹವೇ ಇದರ ದೇಹ ಇದು ಬಾಹ್ಯಾಡಂಬರದ ಅಹಂಕಾರಿಗಳನ್ನೂ ಶಿವಶರಣರಲ್ಲದವರನ್ನು ನುಂಗಿಹಾಕುತ್ತದೆ. ಹೀಗೆ ಇದೆಲ್ಲವನ್ನು ಮನೋಕುಂಡಲಿಗೆ ಅನ್ವಯಿಸಿ ಹೇಳಲಾಗಿದೆ.

ಈ ಹಾವು ಮಾಯೆಗೂ ಪ್ರತೀಕವಾಗಬಹುದೆಂದು ತೋರುತ್ತದೆ. ಮಾಯೆಗೆ ತಲೆಯಿಲ್ಲ ಎಂದರೆ ಅದು ಜಡವಾಗಿದೆ. ಬಾಲವಿಲ್ಲ ಎಂದರೆ ನಿರಾಧಾರವಾಗಿದೆ. ಅದಕ್ಕೆ ನಾಶವಿಲ್ಲ, ಜಾಗ್ರತ ಸ್ವಪ್ನ, ಸುಷ್ಪ್ತಿ ತೊರ್ಯ ಈ ನಾಲ್ಕು ಅವಸ್ಥೆಗಳಲ್ಲಿ ಅದು ಸಂಚರಿಸುತ್ತದೆ. ಈ ಲೋಕದಷ್ಟು ವಿಸ್ತಾರವಾಗಿದೆ. ಆದರೆ ಗತಿ ಅತ್ಯಂತ ಸೂಕ್ಷ್ಮವಾಗಿದೆ. ಎಲ್ಲಿಯವರೆಗೆ ಗುಣಗಳು ವಿಸ್ತಾರವೋ ಅಲ್ಲಿಯವರೆಗೂ ಮಾಹೆ ವಿಸ್ತರಿಸಿದೆ। ಅದಕ್ಕೆ ನಿಶ್ಚಿತವಾದ ರೂಪವಿಲ್ಲ. ಇದರ ಒಳಗೆ ಅಹಂಕಾರ ತುಂಬಿದೆ. ಶರಣರಲ್ಲದವರನ್ನೆಲ್ಲಾ ಇದು ನುಂಗಿ ಹಾಕುತ್ತದೆ. ಇದು ಹಾವಿಗೆ ಮಾಯೆಯೆಂದು ಅರ್ಥೈಸಿ ಹೇಳಬಹುದಾದ ವಿವರಣೆ.

'ಹಲವರ ನುಂಗಿದ ಹಾವು' ಎಂಬುದನ್ನು ಮೃತ್ಯು ಎಂದು ಇಟ್ಟುಕೊಳ್ಳಬಹುದು. ಇದು ಮೂರು ಲೋಕವನ್ನು ಕೊಲ್ಲುತ್ತದೆ. ತಾನೂ ಮಾತ್ರ ಸಾಯುವುದಿಲ್ಲ. ಜೀವನದ ಎಲ್ಲ ಹಂತಗಳನ್ನು ಅದು ವ್ಯಾಪಿಸಿಕೊಂಡಿದೆ. ಲೋಕಾಲೋಕಗಳನ್ನು ವ್ಯಾಪಿಸಿದೆ. ಯಾರನ್ನೂ ಯಾವಾಗ ಹೇಗೆ ಹಿಡಿಯುತ್ತದೆ ಎಂಬುದು ತಿಳಿಯದು. ಶಿವಶರಣರಲ್ಲದವರನ್ನು ಅಹಂಕಾರ, ಆಡಂಬರದ ಗಾರುಡಿಗರನ್ನು ನುಂಗಿ ಹಾಕುತ್ತದೆ. ಈ ಎಲ್ಲವೂಗಳಲ್ಲಿಯೂ ಕಾಣವುದು ಶಿವಶರಣರು ಸಾಮಾನ್ಯನಿಂದ ಅತೀತರಾಗಿ ನಿಲ್ಲುವ ಅನುಭಾವಿಗಳೆಂಬುದನ್ನು

"ಆದಿಯಲ್ಲಿ ಶಿವಬೀಜವಲ್ಲದವರಿಗೆ ವೇದ್ಯವಾಗದು ಶಿವಭಾವ ಶಿವಭಕ್ತಿ
ಲಿಂಗಸ್ಥಲವಳವಡದು ಜಂಗಮಸ್ಥಲವಳವಡದು;
ಪಾದೋದಕ ಪ್ರಸಾದಸ್ಥಲವಳವಡದು
ನರಕದಲ್ಲಿ ಬೀಳುವ ಕರ್ಮಿಗಳಿಗೆ
ಕೂಡಲಸಂಗನ ಶರಣರನುಭಾವ ನೆಲೆಗೊಳ್ಳದು"

'ಶಿವಬೀಜ' ಎಂದರೆ ಶಿವಾಂಶಕನೆಂಬ ಪ್ರಜ್ಞೆ ತಾನು ಶಿವಾಂಶಿಕನೆಂಬುದನ್ನು ತಿಳಿದು ಶಿವಭಾವವನ್ನು ಅಳವಡಿಸಿಕೊಳ್ಳಬೇಕು. ಹಾಗೆ ಗುರುಕರುಣೆಯಿಂದ ಈ ಭಾವವನ್ನು ಪಡೆಯದೇ ಇದ್ದವರಿಗೆ ಶಿವಜ್ಞಾನ, ಶಿವಭಕ್ತಿ, ಲಿಂಗಜಂಗಮ ಪ್ರಸಾದಸ್ಥಲಗಳು ಅಳವಡುವುದಿಲ್ಲ. ಅಂತಹವರಿಗೆ ಕೂಡಲಸಂಗನ ಶರಣರ ಅನುಭವ ನೆಲೆಗೊಳ್ಳದೆ ಅವರು ನರಕಭಾಜನರಾಗುತ್ತಾರೆ.

ಉಂಬ ಬಟ್ಟಲು ಬೇಱೆ ಕಂಚಲ್ಲ; ನೋಡುವ ದರ್ಪಣ ಬೇಱೆ ಕಂಚಲ್ಲ
ಭಾಂಡ ಒಂದೆ, ಭಾಜನ ಒಂದೆ; ಬೆಳಗೆ ಕನ್ನಡಿಯನಿಸಿತ್ತಯ್ಯಾ!
ಅಱಿದಡೆ ಶರಣ ಮಱಿದಡೆ ಮಾನವ
ಮಱೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ

ಉಣ್ಣುವುದಕ್ಕೆ ಉಪಯೋಗಿಸುವ ಬಟ್ಟಲು ಕಂಚಿನಿಂದ ಆಗುತ್ತದೆ. ಹಾಗೆ ಹಿಂದೆ ಮುಖವನ್ನು ನೋಡಿಕೊಳ್ಳುವ ದರ್ಪಣವನ್ನು ಕಂಚಿನಿಂದಲೇ ಮಾಡುತ್ತಿದ್ದರು. ಅದಕ್ಕೆ ವಿಶೇಷ ಹೊಳಪನ್ನು ಕೊಟ್ಟು ಪ್ರತಿಬಿಂಬ ಕಾಣುವಂತೆ ಮಾಡುತ್ತಿದ್ದರು. ಊಟದ ಬಟ್ಟಲಿಗೆ ಆ ಹೊಳಪಿರುತ್ತಿರಲಿಲ್ಲ. ಹೀಗೆ ಉಣ್ಣುವ ಬಟ್ಟಲು ನೋಡುವ ಕನ್ನಡಿ ಎರಡೂ ಒಂದೇ ಲೋಹದಿಂದಲೇ ಆದರೂ ಒಂದನ್ನು ವಿಶೇವಾಗಿ ಬೆಳಗಿದುದರಿಂದ ಅದು ಕನ್ನಡಿ ಎನಿಸಿತು. ಸಾಮಾನ್ಯರಿಗೂ ಶರಣರಿಗೂ ಇರುವ ವ್ಯತ್ಯಾಸ ಇದೆ. ಆತ್ಮದರ್ಶನವಾಗಬೇಕಾದರೆ, ಕಂಚಿನಂತಿರುವ ಮನಸ್ಸು ಬೆಳಗಬೇಕು. ಹೀಗೆ ಬೆಳಗುವ ಕ್ರಿಯೆಯೇ ಶಿವಯೋಗ. ಇದನ್ನು ಅರಿತರೆ ತನ್ನನ್ನು ತಾನೂ ಅರಿತರೆ ಆತ ಶರಣ ಇದನ್ನು ಮರೆತರೆ ಕೇವಲ ಉಪಭೋಗಕ್ಕೆ ಬಳಸಿದರೆ ಆತ ಮಾನವ "ಅರಿತರೆ ಶರಣ ಮರೆತರೆ ಮಾನವ" ಎಂಬುದು ಬಹಳ ಅರ್ಥವತ್ತಾದ ಮಾತು. ಹೀಗೆ ಅರಿಯುವುದೇ ನಿಜವಾದ ಸಾಧನೆ. ಆದ್ದರಿಂದ ಮರೆಯದೆ ಕೂಡಲಸಂಗನನ್ನು ಪೂಜಿಸಿ ಎಂದಿದ್ದಾರೆ.

"ಪುಣ್ಯಪಾಪವೆಂಬ ಉಭಯ ಕರ್ಮವನಾರು ಬಲ್ಲರಯ್ಯಾ
ಇವನಾರಂಬರು? ಕಾಯ ತಾನುಂಬಡೆ ಕಾಯ ಮಣ್ಣು

ಜೀವ ತಾನುಂಬಡೆ ಜೀವ ಬಯಲು!

ಈ ಉಭಯ ನಿರ್ಣಯವ ಕೂಡಲಸಂಗಮದೇವಾ ನಿಮ್ಮ ಶರಣ ಬಲ್ಲ"

ಪುಣ್ಯ ಪಾಪವೆಂಬ ಉಭಯ ಕರ್ಮಗಳ ನಿಜಸ್ವರೂಪವನ್ನು ಬಲ್ಲವರು ಕಡಿಮೆ. ಕಾಯ ಜಡ, ಅದು ಮಣ್ಣು ಅದು ಕರ್ಮಫಲವನ್ನು ತಾನುಣ್ಣುವುದಿಲ್ಲ. ಜೀವನು ಸ್ವರೂಪತ; ಬಯಲು। ಅದು ನಿರಾಕಾರ ಚೇತನ. ಆದುದರಿಂದ ಅದೂ ಕರ್ಮಫಲವನ್ನುಣ್ಣುವುದಿಲ್ಲ. ಹಾಗಾದರೆ ಕರ್ಮಫಲವನ್ನುಣ್ಣುವರಾರು? ಕರ್ಮಕರ್ತೃತ್ವ ಹಾಗೂ ಫಲಭೋಕ್ತೃತ್ವ ಎಂಬ ಈ ಎರಡು ಭಾವನೆಗಳ ಆಶ್ರಯ 'ಅಸ್ಮಿತೆ! ಇದು ಅಜ್ಞಾನಜನ್ಯ! ಅವಿದ್ಯಾಯುಕ್ತ ಅಂತಃಕರಣವಚ್ಛಿನ್ನ ಚೇತನ! ದೇಹ ಹಾಗೂ ಚೇತನಗಳ ಮೇಳದಲ್ಲಿ ಉದಿಸಿದ 'ದೇಹಿ' ಎಂಬ ಭಾವ! ಸಾಮಾನ್ಯ ಭಾವ! ಸಾಮಾನ್ಯ ಭಾಷೆಯಲ್ಲಿ ಈ 'ದೇಹಿ'ಯೇ ಜೀವ ತನ್ನ ಮೂಲವಾದ ವಿಶುದ್ಧ ಚೇತನದ ಭಾನವಿಲ್ಲದ 'ಅಹಂಪ್ರಜ್ಞೆ'! ಈ ಅಜ್ಞಾನಜನ್ಯ ಜೀವನು ಸಮಲ ಅಂತಃಕರಣ (ಮನ)ದ ಮೂಲಕ ಪುಣ್ಯ-ಪಾಪಗಳ ಫಲಗಳನ್ನು ಅನುಭವಿಸುತ್ತಾನೆ. ಈ ಉಭಯ ನಿರ್ಣಯವನ್ನು ಅಂದರೆ ಕಾಯ ಜೀವದ ಸ್ವರೂಪಜ್ಞಾನವನ್ನು ಮತ್ತು ಪುಣ್ಯ ಪಾಪಗಳ ನಿಜಸ್ವರೂಪವನ್ನು ಶರಣರು ಮಾತ್ರ ಅರಿಯಬಲ್ಲರು.

'ಐದು ಮಾನವ ಕುಟ್ಟಿ ಒಂದು ಮಾನವ ಮಾಡು, ಕಂಡಾ ಮದುವಳಿಗೆ

ಇದು ನಮ್ಮ ಬಾಳುವೆ ಮದುವಳಿಗೆ

ಇದು ನಮ್ಮ ವಿಸ್ತಾರ, ಮದುವಳಿಗೆ

ಮದವಳಿದ ನಿಜವುಳಿದ ಬಳಿಕ ಅದು ಸತ್ಯ ಕಾಣಾ

ಕೂಡಲಸಂಗಮದೇವಾ"

'ಐದು ಮಾನ' ಎಂದರೆ ಇಂದ್ರಿಯಗಳು, ಇವುಗಳನ್ನು ಶಿವಾನುಭಾವವೆಂದ ಒನಕೆಯಿಂದ ಕುಟ್ಟಿ ಒಂದೇ ಉನ್ಮನಿ ಮನಸ್ಸನ್ನು ಮಾಡಬೇಕು. ಹೊಸದಾಗಿ ಬಂದ ಮದುವಣಗಿತ್ತಿ ಹೇಳುವ ಧಾಟಿಯಲ್ಲಿದೆ ಈ ವಚನ. ಶರಣಸತಿಗೆ ಈ ಮಾತುಗಳನ್ನು ಹೇಳುತ್ತಿದ್ದಾರೆ. ಇದೇ ಶರಣಸತಿಯ ಜೀವನ ರಹಸ್ಯ ಇದೇ ಬಾಳುವೆ. ಇದೇ ಅಂತರಂಗದ ಅರಳುವಿಕೆ. ಇದರಿಂದ ಅಂತರಂಗದ ಮದವಳಿಯುತ್ತದೆ. ಅಷ್ಟಮದ ಮೊದಲಾದವು ನಷ್ಟವಾಗಿ ಮನಸ್ಸು ಉನ್ಮವವಾಗುತ್ತದೆ. ಹೀಗೆ ಮನಸ್ಸನ್ನು ಅಂತರ್‌ಮುಖಿಗೊಳಿಸುವ ಬಾಳುವೆ ಶಿವಯೋಗ ಜೀವನ. ನನ್ನ ಉದ್ಧಾರವನ್ನು ನಾನೇ ಕಂಡುಕೊಳ್ಳಬೇಕು. "ಉದ್ಧರೆದಾತ್ಮದಾತ್ಮನಂ" ಎಂಬ ಭಗವದ್ಗೀತೆಯಲ್ಲಿ ಕೃಷ್ಣ ಹೇಳಿದ್ದೇನೊ ನಿಜ. ಆದರೆ ಮುಂದೆ ನಮ್ಮ ಧಾರ್ಮಿಕ ಬೆಳವಣಿಗೆ ಇದಕ್ಕೆ

ವಿರುದ್ಧವಾಗಿ ಬೆಳೆದು ಬಂದಿತು. ದೇವಾಲಯಗಳಲ್ಲಿ ಪೂಜೆಯನ್ನು ಮಾಡುವ ಒಂದು ವರ್ಗವೇ ನಿರ್ಮಾಣವಾಯಿತು. ಮುಂದೆ ಅದು ಪುರೋಹಿತಶಾಹಿಯಾಗಿ ಜನ ಸಾಮಾನ್ಯರನ್ನು ಶೋಷಣೆ ಮಾಡಿತು. ತನ್ನ ಪೂಜೆಯನ್ನು ಇನ್ನಾರಿಗೋ ಒಪ್ಪಿಸುವವರನ್ನು ಕಂಡು ಬಸವಣ್ಣನವರು

ತನ್ನಾಶ್ರಯದ ರತಿ ಸುಖವನು, ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ?
ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವತಾ ಮಾಡಬೇಕಲ್ಲದೆ
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ?
ಕೆಮ್ಮನೆ ಉಪಚಾರಕ್ಕೆ ಮಾಡವರಲ್ಲದೆ
ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ?

ಎಂದು ಕಟುವಾಗಿ ಕೇಳುತ್ತಾರೆ. ತನಗೂ ದೇವರಿಗೂ ಮದ್ಯದಲ್ಲಿ ದಳ್ಳಾಳಿಗಳನ್ನು ತಂದುಕೊಳ್ಳಬಾರದೆಂಬುದು ಬಸವಣ್ಣನವರ ಆಶಯ. ಹಲವಾರು ಅನ್ಯಾಯ ಮಾರ್ಗಗಳಿಂದ ಅಪಾರವಾಗಿ ಧನ ಸಂಪಾದಿಸಿ ಆ ಪಾಪವನ್ನು ಕಳೆದುಕೊಳ್ಳುವ ಸಲುವಾಗಿ ದೇವರನ್ನು ಭಾಗಿಯಾಗಿ ಮಾಡಿಕೊಳ್ಳುವವರನ್ನು ಕಂಡು ಬಸವಣ್ಣನವರು ಕೋಪಗೊಳ್ಳುತ್ತಾರೆ.

ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ
ನಾಯ ಹಾಲ ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ
ನಮ್ಮ ಕೂಡಲಸಂಗನ ಶರಣರಿಗಲ್ಲದೆ
ಮಾಡುವ ಅರ್ಥವ್ಯರ್ಥ ಕಂಡಯ್ಯಾ

ಹನ್ನೆರಡನೆಯ ಶತಮಾನ ಸಂದರ್ಭದಲ್ಲಿ ಅಸ್ತಿತ್ವದಲ್ಲಿದ್ದ ಜೈನ, ಬೌದ್ಧ, ವೈದಿಕ ಧರ್ಮಗಳ ಮತ ಪ್ರಚಾರಕ್ಕೆ ಕಟ್ಟುಬಿದ್ದು ಕೆಲವರು ಮತಾಂತರ ಹೊಂದುತ್ತಿದ್ದುದನ್ನು ಕಂಡು ಬಾಳೆಗೆ ಹೇಗೆ ಒಂದೇ ಗೊನೆಯೋ ಹಾಗೆ ಬಾಳುವವನು ಒಂದು ಧ್ಯೇಯ, ಧರ್ಮಕ್ಕೆ ಇದ್ದಿರಬೇಕೆಂಬುದನ್ನು ಈ ವಚನವು ಸ್ಪಷ್ಟಪಡಿಸುತ್ತದೆ.[೧]

ಧಾರ್ಮಿಕ ಆಚರಣೆಗಳನ್ನು ಖಂಡಿಸಿದ ಬಸವಣ್ಣನವರು ಜನ ಸಾಮಾನ್ಯರಲ್ಲಿದ್ದ ಅನೀತಿ ಅಪನಂಬಿಕೆಗಳನ್ನು ಟೀಕಿಸಿದರು. ಮನೆಯ ಬಾಗಿಲಿಗೆ ಬಂದವರಿಗೆ ಅನ್ನ

---

೧. ಬಸವಪುರಷ, ಸಂ. ಹಾ.ಮಾ.ನಾಯಕ್, ಪು. ೧೫೮.

ಹಾಕದೇ ದೇವರಿಗೆ ನೈವೇದ್ಯವನ್ನಿಡುವ ಹೊಟ್ಟೆಗೆ ಅನ್ನವಿಲ್ಲದೆ ಗೋಳಾಡುವ ಅಂಗವಿಕಲರಿಗೆ ಕಾಸು ಹಾಕದೆ ಅರ್ಚಕ ಹಿಡಿದು ತಂದು ಮಂಗಳಾರತಿ ತಟ್ಟೆಗೆ ಕಾಸು ಹಾಕುವ ಆ ಮೂಲಕ ತಮಗೆ ದೈವ ಕೃಪೆ ಒದಗಿತೆಂದು ಸಂತೃಪ್ತಿಗೊಳ್ಳುವ ಜನರ ಕುರಿತು ನಂಬಿಕೆಯನ್ನು ಖಂಡಿಸಿ, ವಿಪರ್ಯಾಸ ಪ್ರವೃತ್ತಿಯನ್ನು ಗೇಲಿಮಾಡಿ ನೈಜ ದಾರಿಯತ್ತ ಅವರ ಗಮನ ಸೆಳೆದಿದ್ದಾರೆ.

ಜಂಗಮ ಸೇವೆಗಿಂತ ಲಿಂಗ ಸೇವೆಯೇ ಮೋಕ್ಷದಾಯಕವೆಂದು ನಂಬಿ ನಡೆಯುತ್ತಿದ್ದ ಜನಗಳಿಗೆ ವಾಸ್ತವ ಜೀವನದ ಅರಿವು ಮಾಡಿಕೊಡಲು ಬಸವಣ್ಣನವರು ಪ್ರಯತ್ನಿಸಿದರು.

ಮರಕ್ಕೆ ಬೇರು ಬಾಯಿಯೆಂದು ತಳಯಿಂಕೆ ನೀರನೆರೆದಡೆ
ಮೇಲೆ ಪಲ್ಲವಿಸಿತ್ತು ನೋಡಾ
ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದಡೆ
ಮುಂದೆ ಸಕಲಾಧವನೀವನು
ಅ ಜಂಗಮನ ಹರನೆಂದು ಕಂಡು, ನರವೆಂದು ಭಾವಿಸಿದಡೆ
ನರಕ ತಪ್ಪದು, ಕಾಣಾ ಕೂಡಲಸಂಗಮದೇವಾ

ಮರದ ಎಲೆಗೆ ನೀರು ಬಿಟ್ಟರೆ ಅದು ಚಿಗುರುವುದಿಲ್ಲ; ಬೇರಿಗೆ ನೀರು ಹೊಯ್ದರೆ ಮೇಲೆ ಪಲ್ಲಮಿಸುತ್ತವೆ. ಹಾಗೆಯೇ ಜಂಗಮನಿಗೆ ಬಡಿಸಿದರೆ ಲಿಂಗಕ್ಕೆ ತಲುಪಿ ಸಮಾಧಾನಗೊಳ್ಳುತ್ತದೆ. "ಜನಸೇವೆಯೇ ಜನಾರ್ಧನನ ಸೇವೆ" ದೇಶ ಸೇವೆಯೇ ಈಶ ಸೇವೆ" ಎಂಬ ಈ ಯುಗದ ಪೋಷಣೆಗಳಿಗೆ ಬಸವಣ್ಣನವರ ಮಾತು ಮುಂಜಾವಿನ ಕೋಳಿ ಕೂಗಿದಂತಿದೆ.[೧]

ಅಂದಿನ ಸಮಾಜದಲ್ಲಿ ಕೆಲವು ಜನರು ಈ ಲೋಕದಲ್ಲಿ ಏನೇ ಮಾಡಿದರೂ ಚಿಂತೆಯಿಲ್ಲ. ಬಡವರ ತಲೆಹೊಡೆದು ಹಣಸಂಪಾದಿಸಿದರೂ ಮುಪ್ಪಿನ ಸಮಯದಲ್ಲಿ ಪುರಾಣ ಪುಣ್ಯಕಥೆಗಳನ್ನು ಕೇಳಿದರೆ ಕೆರೆಕುಂಟೆ ಕಟ್ಟಲು ಹಣ ಸಹಾಯ ಮಾಡಿದರೆ ಪರ ಪೀಡನ ಮಾಡಿದ್ದರೂ ಕರಾತಾಡನ ಮಾಡುವ ಸಭೆಗಳಲ್ಲಿ ಭಾಗವಹಿಸಿದರೆ ಸನ್ಮಾರ್ಗಿಗಳೆಂದು ಪರಲೋಕದಲ್ಲಿ ಸದ್ಗತಿಗೆ ಸಂಚಕಾರವನ್ನು ಕೊಟ್ಟಂತೆ ಆಯಿತೆಂದೂ ನಂಬಿಕೊಂಡು ಅನ್ಯಾಯ ಮಾಡುತ್ತಿದ್ದಿರಬಹುದು. ಇಂಥ ವಿಪರ್ಯಾಸವನ್ನು ಕಂಡು ಬಸವಣ್ಣನವರು ಅವರ ಪೊರೆ ಬೆಳೆದ ಕಣ್ಣಿಗೆ ನೇತ್ರ ಚಿಕಿತ್ಸೆ ಮಾಡಿದರು.

---

೧. ಬಸವಪುರುಷ, ಸಂ.ಹಾ.ಮಾ.ನಾ. ಪು. ೧೫೭.

ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ

ಒಮ್ಮೆ ನಮ್ಮ ನಡೆ–ನುಡಿಗಳಿಂಗ ಈ ಲೋಕದಲ್ಲಿ ಗಳಿಸಿದ್ದೇ ಪರಲೋಕದಲ್ಲಿ ಸಿಕ್ಕುವುದು ಎಂಬ ಬತ್ತಲೆ ದಿಟವನ್ನು ಕತ್ತಲಿನಲ್ಲಿ ತಡಕಾಡುವ ಡಾಂಬಿಕ ಜನಕ್ಕೆ ಹೇಳಿ ಅನ್ಯಲೋಕದ ಚಿಂತೆಬಿಟ್ಟು ಈ ಲೋಕದಲ್ಲಿ ಸರಿಯಾಗಿ ಬಾಳುವ ದೀಕ್ಷೆ ಕೊಡುತ್ತಾರೆ.

ದೇವಲೋಕದ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ
ಸತ್ಯವ ನುಡಿವುದೆ ದೇವಲೋಕ, ಮಿಥ್ಯವ ನುಡಿವುದೆ ಮರ್ತ್ಯಲೋಕ
ಆಚಾರವೇ ಸ್ವರ್ಗ, ಅನಾಚಾರವೇ ನರಕ
ಕೂಡಲಸಂಗಮದೇವಾ ನೀವೆ ಪ್ರಮಾಣ
ಪುಣ್ಯ ಪಾಪಗಳೆಂಬವು ತಮ್ಮ ಇಷ್ಟ ಕಂಡಿರೆ
'ಅಯ್ಯಾ' ಎಂದಡೆ ಸ್ವರ್ಗ 'ಎಲವೋ। ಎಂದಡೆ ನರಕ
ದೇವಾ ಭಕ್ತ ಜಯಾ ಜೀಯಾ ಎಂಬ ನುಡಿಯೊಳಗೆ
ಕೈಲಾಸವೈಮಾದೆ ಕೂಡಲಸಂಗಮದೇವಾ

ಸ್ವರ್ಗನರಕಗಳಂತೆ ಪುಣ್ಯಪಾಪಗಳೆಂಬವೂ ಕೂಡ ಇಲ್ಲಿಯೇ ಇವೆ. ನಮ್ಮ ನಡೆನುಡಿಯನ್ನು ಅವಲಂಬಿಸಿವೆ. ಅಯ್ಯಾ ಎಂದಡೆ ಸ್ವರ್ಗ, ಎಲ್ಲವೋ ಎಂದಡೆ ನರಕ. ವಿನಯದಿಂದ ಬಾಗಿ ಮೃದುವಚನದಿಂದ ಸತ್ಪುರಷರನ್ನು ಸತ್ಕರಿಸುವುದೇ ದೈವಿಕವಾದ ವರ್ತನೆ ದೇವಲೋಕವನ್ನು ನಿರ್ಮಿಸುತ್ತದೆ.

ಸಮಾಜದ ವ್ಯಕ್ತಿಗಳಿಂದ ಕೂಡಿದ್ದು ಸಮಾಜದ ಉದ್ಧಾರವೆಂದರೆ ವ್ಯಕ್ತಿಗಳ ಉದ್ಧಾರ ಪ್ರತಿಯೊಬ್ಬರು ನೆಟ್ಟಗೆ ನೇರಗೆ ಆದಂತೆ ಅವರವರ ಮನೆಯ ದೀಪವನ್ನು ಅವರವರೇ ಹಚ್ಚಿಕೊಂಡರೆ ಯಾರೂ ಯಾರ ಮನೆಯ ದೀಪವನ್ನು ಹಚ್ಚಬೇಕಾಗಿಲ್ಲ. ಅವರ ಮನೆಯ ಕತ್ತಲೆಯ ಗಣಿಯನ್ನಾಗಿ ಮಾಡಿ ಕೊಳ್ಳದಿರುವ ಬಗ್ಗೆ ಎಚ್ಚರವನ್ನು ಈ ವಚನದಲ್ಲಿ ಕಾಣಬಹುದು.

ಲೋಕದ ಡೊಂಕ ನೀವೇಕೆ ತಿದ್ದುವಿರಿ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮನಿಮ್ಮ ಮನವ ಸಂತೈಸಿಕೊಳ್ಳಿ
ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚಿ

ಕೂಡಲಸಂಗಮದೇವ।

ಪರರ ಚಿಂತೆ ನಮಗೇಕಯ್ಯಾ? ನಮ್ಮ ಚಿಂತೆ ನಮಗೆ ಸಾಲದೇ
ಕೂಡಲಸಂಗಯ್ಯಾ ಒಲಿದನೋ ಒಲ್ಲನೋ ಎಂಬ ಚಿಂತೆ
ಹಾಸಲುಂಟು ಹೊದೆಯಲುಂಟು

ಚಿಂತೆ ಮನಸ್ಸಿನಲ್ಲಿ ಹುಟ್ಟುತ್ತವೆ. ಭಾವದಲ್ಲಿ ಬೆಳೆಯುತ್ತದೆ, ಮನಸ್ಸಿನಿಂದ ಭಾವದವರೆಗೂ ಒಂದೇ ಚಿಂತೆ ನನ್ನನ್ನು ವ್ಯಾಪಿಸಿದೆ. ಹಾಸುವುದಕ್ಕೂ ಹೊದೆಯುವುದಕ್ಕೂ ಸಾಕಾಗುವಷ್ಟು ಆ ಚಿಂತೆ ಆವರಿಸಿದೆ ಎಂದು ತಿಳಿಯ ಹೇಳಿದರು. ಅದರಂತೆ ಸಪ್ತ ಸೂತ್ರಗಳನ್ನು ಹೇಳಿ ಬಹಿರಂಗವ ಮರೆತವನ್ನು ನಿಂದಿಸಿ ಅಂತರಂಗ ಶುದ್ಧಿಯ ಹಿರಿಯ ಮೌಲ್ಯ ಸಾರಿದರು.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ
ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ
ಇದೇ ನಮ್ಮ ಕೂಡಲ ಸಂಗಮ ದೇವರನೊಲಿಸುವ ಪರಿ

ಮಾನವರ ಮನಃಶುದ್ಧಿಗೆ ಮೊದಲು ಮನ್ನಣೆ ಕೊಡಬೇಕೆಂದು ಹೇಳಿದ ಬಸವಣ್ಣನವರು ಸ್ವಧರ್ಮಿಯರೆನ್ನದೆ ಪರಧರ್ಮಿಯರೆನ್ನದೆ ತಪ್ಪಿತಸ್ಥರನ್ನೆಲ್ಲ ತಿದ್ದಿದರು, ನೇರ್ಪುಗೊಳಿಸಿದರು.

ಒಳಗೆ ಕುಟಿಲ ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬವರ
ಬಲ್ಲನೊಲ್ಲಯ್ಯ ಲಿಂಗವು
ಅವರು ಸತ್ಪತಕ್ಕೆ ಸಲ್ಲರು ಸಲ್ಲರಯ್ಯ
ಒಳಹೊರಗೊಂದಾಗದವರಿಗೆ ಅಳಿಯಾಸೆ ದೋರಿ
ಬಿಸಾಡುವನವರ ಜಗದೀಶ ಕೂಡಲಸಂಗಮದೇವಾ
ಸಾರ! ಸಜ್ಜನರ ಸಂಗವೆ ಮಾಡುವುದು
ದೂರ! ದುರ್ಜನರ ಸಂಗ ಬೇಡದಯ್ಯಾ
ಆವ ಹಾವಾದರೇನು? ವಿಷವೊಂದೇ
ಅಂತವರ ಸಂಗ ಬೇಡಯ್ಯಾ
ಅಂತವರ ಸಂಗ ಬೇಡಯ್ಯಾ
ಅಂತರಂಗ ಶುದ್ಧವಿಲ್ಲದವರ ಸಂಗಮ
ಸಿಂಗಿ, ಕಾಳಕೂಟ ವಿಷವೋ, ಕೂಡಲಸಂಗಯ್ಯಾ

ಸಜ್ಜನರ ಸಂಗ ಸಾರಾವತ್ತಾದದ್ದು ಪರಿಣಾಮಕಾರಿಯಾದದ್ದು ಅಪೇಕ್ಷಣೀಯವಾದದ್ದು. ಹಾಗೆ ದುರ್ಜನರ ಸಂಗ ದೂರ ಇರಬೇಕಾದುದು. ಒಂದು ಸಾರ! ಇನ್ನೊಂದು ದೂರು! ಎಂಬ ಮಾತನ್ನು ಪರಿಣಾಮಕಾರಿಯಾಗಿ ಬಳಸಿದ್ದಾರೆ. ಎಂತಹ ಪಾಪಿಗೂ ಉದ್ದಾರವಿದೆ ಎಂಬ ಆತ್ಮವಿಶ್ವಾಸವನ್ನು ಬಸವಣ್ಣನವರು ಬೆಳೆಸುತ್ತಿದ್ದಾರೆ. ಧರ್ಮ ಅನೇಕ ವೇಳೆ ಜನ ಸಾಮಾನ್ಯರಲ್ಲಿ ಕೀಳರಿಮೆಯನ್ನು ಬೆಳೆಸುವ ಒಂದು ಸಾಧನವಾಗಿತ್ತು. ಬಸವಣ್ಣನವರು ಅದರ ಮೂಲೋತ್ಪಾದನೆ ಮಾಡಲು ಪ್ರಯತ್ನಿಸಿದರು. ಸಮಾಜದ ಕುಂದುಕೊರತೆಗಳನ್ನು ಸುಳ್ಳುವಂಚನೆಗಳನ್ನು ಢಾಂಬಿಕತೆಯನ್ನು ಆಶುಕವಿತೆಯಂತಿರುವ ಈ ವಚನ ವಿಡಂಬಿಸುತ್ತದೆ.

ಎಲವೋ ಎಲವೋ ಪಾಪಕರ್ಮವ ಮಾಡಿದವನೇ
ಎಲವೋ, ಎಲವೋ ಬ್ರಾಹ್ಮಣಹತ್ಯವ ಮಾಡಿದವನೇ
ಒಮ್ಮೆ 'ಶರಣೆ'ನ್ನೆಲವೋ!
ಒಮ್ಮೆ 'ಶರಣೆಂದಡೆ ಪಾಪಕರ್ಮದ ಓಡುವವು'
ಸರ್ವಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೈವವು
ಒಟ್ಟಿಗೆ ಶರಣೆನ್ನು ನಮ್ಮ ಕೂಡಲಸಂಗದೇವಂಗೆ!

ಬಸವಣ್ಣನವರು ಸಮಾಜದಲ್ಲಿ ಭ್ರಾತೃತ್ವ ಭಾವನೆಯಿರಬೇಕೆಂದು ಆಶಿಸಿದರು ಅನ್ಯೋನ್ಯತೆ ಸಹಕಾರ, ಸಮಾಜದ ಅಡಿಗಲ್ಲು ಎಂಬುದರ ಅರಿವು ಬಸವನಣ್ಣನವರಿಗೆ ಇತ್ತು. ಆದರೆ ಸಮಾಜದಲ್ಲಿ ಕಂಡುಬರುವ ಅಸಹಕಾರ, ವೈಷಮ್ಯ, ಸ್ವಾರ್ಥ ಮುಂತಾದ ಗುಣಗಳನ್ನು ಕಂಡು ಮನುಷ್ಯರಿಗಿಂತ ಪಶು-ಪಕ್ಷಿಗಳಷ್ಟೆ ಈ ನಿಟ್ಟಿನಲ್ಲಿ ಬಹುಪಾಲು ವಾಸಿಯೆನಿಸಿರಬೇಕು.

ಕಾಗೆ ಬಂದುಗಳ ಕಂಡಡೆ ಕರೆಯದೆ ತನ್ನ ಬಳಗವನು?
ಕೋಳಿ ಬಂದು ಕುಟುಕ ಕಂಡಡೆ ಕೂಗಿ ಕರೆಯದೆ ತನ್ನ ಕುಲವನ್ನೆಲ್ಲವ?
ಸಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದಡೆ ಕಾಗೆ ಕೋಳಿಯಿಂದ ಕರಕಷ್ಟ
ಕೂಡಲಸಂಗಮದೇವಾ.

ಮನುಷ್ಯ ತಾನು ಪಡೆದುದನ್ನು ಹಂಚಿಕೊಂಡು ತಿನ್ನಬೇಕೆಂಬುದನ್ನು ಹೇಳುತ್ತಿದ್ದಾರೆ. ನಿತ್ಯ ಕಾಣುತ್ತಿರುವ ಎರಡು ಪ್ರಾಣಿಗಳ ಉದಾಹರಣೆಯಿಂದ ಅದನ್ನು ಮನದಟ್ಟು ಮಾಡಿಕೊಡುತ್ತಾರೆ. "ಎಲ್ಲವೂ ಎಲ್ಲರಿಗಾಗಿ ಎಲ್ಲರಿಂದ" ಎಂದು ಇಂದಿನ ಸರ್ವೋದಯ ಸಮಾಜದ ಬೀಜಮಂತ್ರ ಬಸವಣ್ಣನವರು ಹೇಳಿದ್ದಾರೆ.

ದಯವಿಲ್ಲದ ಧರ್ಮವದೇವುದಯ್ಯಾ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯು
ದಯವೇ ಧರ್ಮದ ಮೂಲವಯ್ಯ
ಕೂಡಲಸಂಗಯ್ಯನಂತಲ್ಲದೊಲ್ಲವಯ್ಯಾ

ಈ ಬಗೆಯ ಮಾತುಗಳು ಜನತೆಯ ಚಿತ್ತವನ್ನು ತಟ್ಟಿದವು, ಮುಟ್ಟಿದವು ಬಸವಣ್ಣನವರು ನಿರ್ದಾಕ್ಷಿಣ್ಯವಾಗಿ ನಿಷ್ಠುರವಾಗಿ ನುಡಿದರೂ ಅವರು ದಯೆಯ ದ್ಯೋತಕವಾಗಿದ್ದರು. ನಯ-ವಿನಯಗಳ ಸಾಕಾರ ರೂಪಿಯಾಗಿದ್ದರು. ಇವು ಇತರರಲ್ಲೂ ಇರಬೇಕೆಂದು ಬಯಸಿದ ವ್ಯಕ್ತಿ ಬಸವಣ್ಣನವರು.

ಕಂಡ ಭಕ್ತರಿಗೆ ಕೈ ಮುಗಿವಾತನೆ ಭಕ್ತ
ಮೃದ ವಚನವೆ ಸಕಲ ಜಪಂಗಳಯ್ಯಾ
ಮೃದ ವಚನವೇ ಸಕಲ ತಪಂಗಳಯ್ಯ
ಸದುವಿನಯವೆ ಸದಾಶಿವನ ಒಲುಮೆಯಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ

ಏನಿ ಬಂದಿರಿ ಹರುಳದಿದ್ದರೆ ಎಂದಡೆ
ನಿಮ್ಮ ಮೈಸಿರಿ ಹಾರಿ ಹೋಹುದೆ?
ಕುಳ್ಳಿರೆಂದಡೆ ನೆಲಕುಳಿಯೋಹುದೆ?
ಒಡನೆ ನುಡಿದಡೆ ಸಿರ ಹೊಟ್ಟೆಯೊಡೆವುದೇ?
ಕೊಡಲಿಲ್ಲದ್ದಕೊಂಡು ಗುಣವಿಲ್ಲದಿದ್ದಡೆ
ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವಾ

ಸಾಮಾಜಿಕ ಕ್ರಾಂತಿಯ ಜೊತೆಯಲ್ಲಿ ನೈತಿಕ ಪ್ರಜ್ಞೆಗೆ ಕಾರಣವಾದ ಬಸವಣ್ಣನವರು ಹಣವನ್ನು ಮಾಯೆ ಎಂದು ನಿರಾಕರಿಸದೆ, ಹಣ ಪವಿತ್ರವಾದದ್ದು ಮಾನವನ ಎಲ್ಲ ಚಟುವಟಿಕೆಗಳಿಗೂ ಮೂಲಭೂತವಾದದ್ದು. ಆದರೆ ಅದೇ ಸರ್ವಸ್ವವಲ್ಲ ಕೊನೆಯ ಗುರಿಯಲ್ಲ. ಕೊನೆಯ ಗುರಿಯನ್ನು ಸಾಧಿಸುವ ನಿಮಿತ್ತ ಸಾಧನ. ಇದನ್ನು ತಿರಸ್ಕರಿಸುವಂತಿಲ್ಲ, ಪವಿತ್ರಸಾಧನವಾಗಿ ಪರಿವರ್ತಿಸಿಕೊಳ್ಳಬೇಕು ಎಂಬುದು ಅವರ ದೃಷ್ಟಿ ನಿಜವಾಗಿ ನೋಡಿದರೆ ಎಲ್ಲ ಸಾಮಾಜಿಕ ವ್ಯವಸ್ಥೆಯ ಅಡಿಗಲ್ಲು ಅರ್ಥವ್ಯವಸ್ಥೆ ಒಂದಲ್ಲಾ ಒಂದು ರೂಪದಲ್ಲಿ ಅದರ ಪ್ರಭಾವ ಸಾಮಾಜಿಕ ಏರುಪೇರುಗಳನ್ನು ನಿರ್ಣಯಿಸುತ್ತದೆ. ಆರ್ಥಿಕ ಶೋಷಣೆಯೇ ಎಲ್ಲ ಸಮಾಜಿಕ ಶೋಷಣೆಗಳ ಮೂಲ.

ಇದನ್ನು ಗ್ರಹಿಸಿದ ಬಸವಣ್ಣನವರು ವರ್ಣವ್ಯವಸ್ಥೆಯ ವಿರೋಧದ ಜೊತೆಯಲ್ಲಿಯೇ ಅರ್ಥವ್ಯವಸ್ಥೆಯ ವಿಧಾಯಕ ಕಾರ್ಯವನ್ನು ಬೆಳೆಸಿಕೊಂಡು ಬಂದರು. ಸ್ವಯಂಪೂರ್ಣ ಸಮಾಜದ ಸುವ್ಯವಸ್ಥೆ ಅವರ ಆದರ್ಶವಾಗಿತ್ತು. ಸಮಾಜದಲ್ಲಿ ಎಲ್ಲರ ಎಲ್ಲ ರೀತಿಯ ವಿಕಾಸಕ್ಕೂ ಈ ಸಾಮಾಜಿಕ ವ್ಯವಸ್ಥೆ ಕಾರಣವಾಗಬೇಕು. ವ್ಯಷ್ಟಿಯ ಉದ್ಧಾರ, ಸಮಷ್ಟಿಯ ಹಿತಕ್ಕೆ ವಿರೋಧವಾಗಬಾರದು. ಉತ್ತಮ ಸೌಲಭ್ಯಗಳು ದಲಿತರ ಶೋಷಣೆಗೆ ಕಾರಣವಾಗಬಾರದು ಎನ್ನುವ ಆಶಯ ಬಸವಣ್ಣನವರದು.

ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದಯ್ಯ!
ಬಡತನವೆಂಬ ಮಂತ್ರವಾದಿಯಾಗಲು
ಒಡನೆ ನುಡಿದರು ಕೂಡಲಸಂಗಮದೇವಾ

ಹೀಗೆ ಸಿರಿಗರ ಹೊಡೆದವರ ಒಂದು ರೀತಿಯಾದರೆ ವಿನಯಕ್ಕೆ ಕಾರಣವಾಗಬೇಕಾದ ವಿದ್ಯೆಯ ಗರ್ವಗ್ರಹವೂ ಇನ್ನೊಂದು ರೀತಿಯ ಪೀಡೆ–ಯಾಗಬಹುದು. ವಿಚಾರವಿಲ್ಲದ ಆಡಂಬರ ಅಹಂಕಾರಗಳಿಗೆ ಕಾರಣವಾಗಬಹುದು ಅಂತಹವರನ್ನು ಕುರಿತು ಬಸವಣ್ಣ

ವೇದವನ್ನೋದಿದ ವಿಪ್ರತು ಹೊನಲಲ್ಲಿ ಹೋದ ಕೇಡ ನೊಡಿರೆ!
ಭರ್ಗೋ ದೇವಸ್ಯ ಧೀಮಹಿ' ಎಂಬುದು
ಒಬ್ಬರಿಗಾಗಿ ವಿಚಾರವಲ್ಲ ನೋಡಿರೆ
ಕೂಡಲಸಂಗಮದೇವಾ

ಎಂದು ಅವರ ಅಜ್ಞಾನಕ್ಕೂ ಅಂಧಶ್ರದ್ಧೆಗೂ ಅನುಕಂಪಪಡುತ್ತಾರೆ. ಸರ್ವರ ಉದ್ಧಾರಕ್ಕೆ ಕಾರಣವಾಗುವ ಸರ್ವೋದಯ ಮಾರ್ಗವೊಂದನ್ನು ಅವರು ಆವಿಷ್ಕರಿಸಿದರು. ಅದೇ ಕಾಯಕದ ಪರಿಕಲ್ಪನೆ ಸತ್ಯಾಗ್ರಹ ಸರ್ವೋದಯ ಇವು ಗಾಂಧೀಜಿಯವರ ಕೊಡುಗೆಯಾದರೆ ಕಾಯಕ ಮತ್ತು ದಾಸೋಹ ಇವು ಬಸವಣ್ಣನವರ ಜೀವನ ಸಾಧನೆಯ ಎರಡು ಕಣ್ಣುಗಳು[೧]

೧. ವಚನ ಚಳುವಳಿ ಡಾ.ಹೆಚ್.ತಿಪ್ಪೇರುದ್ರಸ್ವಾಮಿ, ಶ್ರೀ ಶರಣ ಬಸವೇಶ್ವರ ಗ್ರಂಥಾಲಯ. ವಿಶ್ವವಿದ್ಯಾನಿಲಯ, ಗುಲಬರ್ಗಾ, ೧೯೮೭, ಪು. ೨೮.

ಬಸವಣ್ಣನವರ ಸಾಮಾಜಿಕ ಮತ್ತು ನೈತಿಕ ಪ್ರಜ್ಞೆಗೆ ಕಾಯಕ ಅಡಿಗಲ್ಲಾಯಿತು. ಅದು ಸಿದ್ಧಾಂತವಾಗಿ ಮಾತ್ರ ಉಳಿಯದೇ ಸಾವಿರಾರು ಜನರ ಆಚರಣೆಯ ಆಂದೋಲನವಾಯಿತು. ಶರಣರ ಸಾಮಾಜಿಕ ತತ್ವಕ್ಕೆ ಪೂರ್ಣಜೀವನದ ದಾರ್ಶನಿಕತೆಯನ್ನು ಇದು ತಂದುಕೊಟ್ಟಿತು. ಇಂದಿನ ಅತ್ಯಂತ ಆಧುನಿಕ ದೃಷ್ಟಿಗೂ ಆಧುನಿಕವಾಗಿ ಸಾರ್ವಕಾಲಿಕವಾದ ಸತ್ವ ಈ ಕಾಯಕದ ಕಲ್ಪನೆಯಲ್ಲಿದೆ. ಪ್ರತಿಯೊಬ್ಬ ವ್ಯಕ್ತಿಯೂ ಒಂದಲ್ಲ ಒಂದು ಕೆಲಸವನ್ನು ಮಾಡುತ್ತಲೇ ಇರಬೇಕು. ಕೆಲಸವನ್ನು ಮಾಡುವವನಿಗೆ ಇನ್ನೊಬ್ಬನ ದುಡಿಮೆಯನ್ನು ಕುಳಿತು ತಿನ್ನುವ ಅಧಿಕಾರವಿಲ್ಲ ಯಾವುದೇ ಉದ್ಯೋಗವನ್ನು ಕೈಗೊಂಡಿದ್ದರೂ ಅದು ವ್ಯಕ್ತಿಯ ಸರ್ವಾಂಗೀಣ ವಿಕಾಸಕ್ಕೆ ಅಡ್ಡಿಯಾಗಬಾರದು. ಉದ್ಯೋಗದಲ್ಲಿ ಮೇಲು-ಕೀಳುಗಳಿಲ್ಲ. ಅದನ್ನು ನಿರ್ವಹಿಸುವ ಮನೋಧರ್ಮದಲ್ಲಿದೆ. ಹಾಗೇ ನಿರ್ವಹಿಸಿದಾಗ ಮಾತ್ರ ಉದ್ಯೋಗ ಕಾಯಕವಾಗುತ್ತದೆ. ಹೀಗೆ ಕಾಯಕದಿಂದ ಪಡೆದ ಫಲವನ್ನು ಸಮಾಜಕ್ಕೂ ಅರ್ಪಿಸಬೇಕು ಇದೇ ದಾಸೋಹ. ಸಮಾಜ ಸ್ವಯಂಪೂರ್ಣವಾಗಬೇಕಾದರೆ, ಸುಖಮಯವಾಗಬೇಕಾದರೆ ಎಲ್ಲರೂ ಉದ್ಯೋಗಗಳಲ್ಲಿ ನಿರತರಾಗಲೇಬೇಕು. ಭಿಕ್ಷೆ ಬೇಡುವುದನ್ನು ಅವರು ಕಟುವಾಗಿ ಖಂಡಿಸಿದರು. ಇನ್ನೊಬ್ಬರ ಹಂಗಿನಲ್ಲಿ ಬಾಳುವ ಜೀವನ ಜೀವನವೇ ಅಲ್ಲ. ಅನ್ಯರ ಮನೆಗೆ ಹೋಗಿ "ತನ್ನುದರವ ಹೊರೆಯದ ಅಚ್ಚ ಶರಣರ ಕಂಡರೆ ನಿಶ್ಚಲವಾಗಿ ಕೂಡಲಸಂಗಯ್ಯನೆಂಬೆ" ಎನ್ನುವರು ಬಸವಣ್ಣ ಉದ್ಯೋಗಗಳನ್ನು ನೋಡುವ ಸಾಮಾಜಿಕ ದೃಷ್ಟಿಯೇ ಬದಲಾಯಿತು. ದುಡಿಮೆಯ ಸಾಮಾಜಿಕ ಮತ್ತು ನೈತಿಕ ಮೌಲ್ಯ ಹೆಚ್ಚಾಯಿತು. ದುಡಿಮೆ ಅನಿವಾರ್ಯವೆಂಬುದರ ಜೊತೆಗೆ ಅಷ್ಟೇ ನ್ಯಾಯಮಾರ್ಗದಲ್ಲಿರಬೇಕು ಎಂಬುದಕ್ಕೂ ಒತ್ತುಕೊಟ್ಟಿತು. ಸಮಾಜದ ಹಿತಕ್ಕೆ ಅಗತ್ಯವಾದ ಉದ್ಯೋಗ ಯಾವುದೇ ಆಗಲಿ ಸತ್ಯಶುದ್ಧವಾಗಿದ್ದರೆ ಶ್ರೇಷ್ಠವಾದುದಾಗುತ್ತವೆ. ಅದಕ್ಕೆ ಬದಲಾಗಿ ಅಸತ್ಯ ಅಧರ್ಮಗಳಿಂದ ಮಾಡುವ ದುಡಿಮೆ. ಪಾಪದ ಹಣ, ತಾನು ಕೈಗೊಂಡ ಉದ್ಯೋಗ ಸಮಾಜಕ್ಕೆ ಹಾನಿಕರವಾಗಿದೆ ಸಮಾಜದ ಅವಶ್ಯಕತೆಗಳನ್ನು ಪೂರೈಸುವಂತಿರಬೇಕು.

ಬಸವಣ್ಣನವರು ಬ್ರಾಹ್ಮಣ್ಯವನ್ನು ನಿರಾಕರಿಸಿದರೂ ಅವರು ಅಂದಿನ ರಾಜಶಾಹಿಯೊಂದಿಗೆ ಹೊಂದಿಕೊಂಡು ಬದುಕಬೇಕಾಗಿ ಬಂದದ್ದರಿಂದ ಬೇರೆ ಬಗೆಯ ಬಿಕ್ಕಟ್ಟುಗಳನ್ನು ಎದುರಿಸಬೇಕಾಯಿತು. ಅಂದಿನ ಆಂದೋಲನಕ್ಕೆ ಅದರ ಸಂಘಟನೆಗೆ ಮತ್ತು ಅದರ ನಿರ್ವಹಣೆಗೆ ಸಾಕಷ್ಟು ಜನಬಲ ಮತ್ತು ಧನಬಲ ಅಗತ್ಯವಾಗಿದ್ದು ಬಸವಣ್ಣನವರ ಅಧಿಕಾರದಿಂದಲೂ ನೆರವು ದೊರೆತಿರಬೇಕು. ಅವರು ರಾಜನೊಂದಿಗೆ

ರಾಜತ್ವದೊಂದಿಗೆ ತಮಗೆ ಇರುವ ಸಂಬಂಧಗಳನ್ನು ತಮ್ಮ ನಿಲುವುಗಳನ್ನು ಅತ್ಯಂತ ಸ್ಪಷ್ಟವಾಗಿ ಬಿಚ್ಚಿಡುತ್ತಾತಮ್ಮ ಸುತ್ತಣ ಜನ ಆಗಾಗ ಸುಳಿಯಪಟ್ಟರೂ ಒಟ್ಟಾರೆಯಾಗಿ ತಮ್ಮನ್ನು "ಇವನಾರವ ಇವನಾರವ" ಎಂದುಕೊಳ್ಳದೆ 'ಇವ ನಮ್ಮವ ಇವ ನಮ್ಮವ'ವೆಂದು ಒಪ್ಪಿಕೊಳ್ಳುವಂತೆ ನಡೆದುಕೊಂಡರು.

ಬಸವಣ್ಣನವರು ಮೂಲತಃ ಅನುಭಾವಿಕ ನಿಲುವಿನ ವ್ಯಕ್ತಿಯಾದ್ದರಿಂದ ಅವರ ಪಾಲಿಗೆ ಅಧಿಕಾರ ಇತ್ಯಾದಿಗಳ ಬಗ್ಗೆ ಅಂತಹ ಭ್ರಮೆಗಳೇನೂ ಇರಲಿಲ್ಲ. ಲೋಕದ ಬೋಗ-ವೈಭವಗಳ ಬಗೆಗೆ ವಿರಕ್ತನಾಗುವಂತಹ ಚೇತನಕೆ ಇವು ಯಾವುವು ದೊಡ್ಡವೆಂದು ತೋರುವುದಿಲ್ಲ. ಅವರಿಗೆ ಭೋಗ ವೈಭವಗಳಿಗಿಂತ ಸತ್ಯದ ನಿಲುವನ್ನರಿಯುವುದು ಮುಖ್ಯವಾಗಿತ್ತು.

ಆನೆಯನೇರಿಕೊಂಡು ಹೋದಿರಿ ನೀವು
ಕುದುರೆನೇರಿಕೊಂಡು ಹೋದಿರಿ ನೀವು
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ ಅಣ್ಣಾ
ಸತ್ಯದ ನಿಲುವನರಿಯದೆ ಹೋದಿರಲ್ಲಾ. . . . .

ಎಂಬ ಮಾತಿನಲ್ಲಿ ಈ ಲೋಕದ ಭೋಗ-ಭಾಗ್ಯಗಳ ಬೆನ್ನು ಹತ್ತಿ ಸತ್ಯದ ನಿಲುವನ್ನರಿಯದೆ ವ್ಯರ್ಥವಾಗಿ ಹೋದ ಪದವಿಗಳ ಮತ್ತು ಅಧಿಕಾರಿಗಳ ಬಗ್ಗೆ ತಾಳಿದ ಕನಿಕರ ಅಭಿವ್ಯಕ್ತವಾಗಿದೆ.

ಅರಸು ಮುನಿದಂತೆ ನಾಡೊಳಗಿರಬಾರದಮ್ಮ
ಗಂಡ ಮುನಿದೊಡೆ ಮನೆಯೊಳಗೆ ಇರಬಾರದಯ್ಯ
ಕೂಡಲಸಂಗಮದೇವಾ
ಜಂಗಮ ಮುನಿದಡೆ ನಾನೆಂತು ಬದುಕುವೆನೆ?

ಈ ಮಾತುಗಳಲ್ಲಿ ರಾಜನ ಆಗ್ರಹಕ್ಕೊಳಗಾದರೆ ಅಂತಹವನಿಗೆ ಉಳಿಗಾಲವೇ ಇಲ್ಲ ಎಂಬ ಕಟುಸತ್ಯವನ್ನು ಅರಿತವರಾಗಿದ್ದರು. ರಾಜ ಕೂಡ ಎಲ್ಲರಂತೆ ಒಬ್ಬ ಸಾಮಾನ್ಯ ಮನುಷ್ಯ. ಅವನಿಗೆ ಬೆಲೆ ಬರುವುದು ಅವನ ರಾಜತ್ವ ಅಥವಾ ರಾಜಪದವಿಯಿಂದ ಅವನು ಮೃತ್ಯುವಿಗೆ ಒಳಗಾಗುವ ಒಬ್ಬ ಮನುಷ್ಯ ಇಂತಹವನು ಸತ್ತರೆ ಉಳಿದವರ ಶವಗಳಿಗೆ ಇವನ ಶವಕ್ಕೂ ಏನೂ ವ್ಯತ್ಯಾಸ?

ವ್ಯಾದನೊಂದು ಮೊಲನ ತಂದಡೆ ಸಲುವ ಹಾಗಕ್ಕೆ ಬಿಲವರಯ್ಯ
ನೆಲನಾಳ್ವನ ಹೆಣನೆಂದಡೆ ಒಂದಡೆಕೆಗೆ ಕೊಂಬರಿಲ್ಲ ನೋಡಯ್ಯಾ

ಮೊಲನಿಂದ ಕರಕಷ್ಟ ನರನ ಬಾಳುವೆ
ಸಲೆ ನಂಬೊ ನಮ್ಮ ಕೂಡಲಸಂಗಮದೇವನ

ರಾಜನಾದವನ ಶವಕ್ಕೆ ಒಂದು ಸತ್ತ ಮೊಲಕ್ಕಿರುವ ಬೆಲೆಯೂ ಇಲ್ಲ. ಇಂಥ ನಿಕೃಷ್ಟವಾದ ಪದಾರ್ಥ ಅದು. ಎಲ್ಲ ಅನುಭಾವಗಳಂತೆ 'ಮೃತ್ಯುತತ್ತ್ವ'ವನ್ನು ಕೇಂದ್ರದಲ್ಲಿರಿಸಿಕೊಂಡು ಲೋಕದ ಪದವಿ, ಐಶ್ವರ್ಯ ಇತ್ಯಾದಿಗಳನ್ನು ಒರೆಗೆ ಹಚ್ಚುವ ಬಸವಣ್ಣನವರಿಗೆ ಅವರು ವಹಿಸಿಕೊಂಡ ಪದವಿ ಕೂಡ ನಿಕೃಷ್ಟವಾದುದಕ್ಕೆ ಅವರು ಬಹಿರಂಗದಲ್ಲಿ ಯಾವನೊ ಒಬ್ಬ ಒಡೆಯನ ಸೇವೆಗೆ ನಿಂತಂತೆ ಕಾಣಿಸಿದರೂ ಅಂತರಂಗದಲ್ಲಿ ಅವರ ಒಡೆಯರೇ ಬೇರೆ "ಎನಗೆ ಒಡೆಯರುಂಟು ಕೂಡಲಸಂಗನ ಶರಣರು" ಎಂದು ಹೇಳುವುದರ ಮೂಲಕ ಮಾನಸಿಕವಾಗಿ ತಮ್ಮ ನಿಷ್ಠೆ ಯಾರಿಗೆ ಎಂಬುದನ್ನು ಸ್ಪಷ್ಟವಾಗಿ ಹೇಳಿದ್ದಾರೆ.

ಅರಸನ ಮನೆಯಲ್ಲಿ ಅರಸಿಯಾಗಿಪ್ಪುದರಿಂದ
ಭಕ್ತರ ಮನೆಯ ತೊತ್ತಾಗಿಪ್ಪುದು ಕರಲೇಸಯ್ಯಾ

ಎಂಬುದನ್ನು ಅವರು ಚೆನ್ನಾಗಿ ಬಲ್ಲರು ಒಬ್ಬ ಮನುಷ್ಯನಾಗಿ ಬದುಕುವುದಕ್ಕೆ ಯಾವುದಾದರೊಂದು ಉದ್ಯೋಗವನ್ನು ಅವಲಂಬಿಸುವುದು ತಪ್ಪೇನಿಲ್ಲ ಆದರೆ ತಮ್ಮ ಈ ವ್ಯವಹಾರ ಮತ್ತು ಪರಸೇವೆ, ಲಿಂಗಾರ್ಚನೆ ಮತ್ತು ಜಂಗಮ ದಾಸೋಹಕ್ಕೆ ಈ ಎರಡೂ ಮೂಲತಃ ಅಧ್ಯಾತ್ಮಿಕವಾದ ಕ್ರಿಯೆಗಳು. ಇದು ತಮ್ಮ ಸ್ವಾರ್ಥಕ್ಕಾಗಿ ಅಥವಾ ಕೇವಲ ಉದರ ಪೋಷಣೆಯ ಏಕೈಕ ಉದ್ದೇಶಕ್ಕಾಗಿ ಅಲ್ಲ. ಈ ಅಭಿಪ್ರಾಯವನ್ನು ಇನಪ್ಪು ಸಮರ್ಥಿಸುತ್ತಾ

ಹೊತ್ತಾರೆ ಎದ್ದು ಕಣ್ಣ ಹೊಡೆಯುತ್ತ
ಎನ್ನ ಒಡಲಿಂಗೆ, ಎನ್ನ ಒಡವೆಗೆಂದು ಎನ್ನಮಡದಿ–ಮಕ್ಕಳಿಗೆಂದು
ಕುದಿದೆನಾದಡೆ ಎನ್ನ ಮನಕ್ಕೆ ಮನವೇ ಸಾಕ್ಷಿ
ಹೊಲೆ ಹೊಲೆಯರ ಮನೆಯ ಹೊಕ್ಕದಡೆಯೂ
ಸಲೆ ಕೈ ಕೂಲಿಯ ಮಾಡಿಯಾದರೆಯೂ
ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲ ವಸರಕ್ಕೆ
ಕುದಿದೆನಾದಡೆ
ತಲೆದಂಡ ಕೂಡಲಸಂಗಮದೇವಾ

ಎಂದು ಉದ್ಘೋಷಿಸುತ್ತಾರೆ. ಈ ಉದ್ಘೋಷ ಅತ್ಯಂತ ಪ್ರಾಮಾಣಿಕವಾದ ಮನುಷ್ಯನೊಬ್ಬನ ಕಳಕಳಿಯನ್ನು ಅತ್ಯಂತ ತೀವ್ರವಾಗಿ ಪ್ರಕಟಿಸುತ್ತದೆ. ದಿನವೂ ಅವರು ನಡೆಸುತ್ತಿದ್ದ ಲಿಂಗಾರ್ಚನೆ ಜಂಗಮ ದಾಸೋಹ ಕಂಡು ಆಗದವರು ಈ ಆರೋಪವನ್ನು ಮಾಡಿರಬೇಕು. ಇಂಥಮಾತಿಗೆ ಬಸವಣ್ಣನವರು

ಊರ ಮುಂದೆ ಹಾಲ ಹಳ್ಳ ಹರಿವುತ್ತಿರಲು
ಒರೆಯಾವಿನ ಬೆನ್ನ ಹರಿಯಲದೇಕಯ್ಯಾ?
ಲಜ್ಜಗೆಡಲೇಕೆ? ನಾಣುಗೆಡಲೇಕೆ?
ಕೂಡಲಸಂಗಮದೇವನುಳ್ಳನ್ನಕ್ಕ
ಬಿಜ್ಜಳ ಭಂಡಾರವೆನಗೇಕಯ್ಯ

ಎಂದು ಉತ್ತರ ಕೊಟ್ಟಂತೆ ತೋರುತ್ತದೆ.

"ಕುಲಮದಳಿಯದನ್ನಕ್ಕ ಶರಣನಾಗಲೇಕೆ?
ವಿಧಿವಶ ಬಿಡದನ್ನಕ್ಕ ಭಕ್ತನಾಗಲೇಕೆ?
ಹಮ್ಮಿನ ಸೊಮ್ಮಿನ ಸಂಬಂದ ಬಿಟ್ಟು
ಕಿಂಕಿಲ ಕಿಂಕಿಲ ಕಿಂಕಿಲನಾಗಿರಬೇಕು
ಹೆಪ್ಪನೆಱೆದ ಹಾಲು ಕೆಟ್ಟು ತುಪ್ಪವಪ್ಪಂತೆ ಇಪ್ಪರು
ಕೂಡಲಸಂಗಮದೇವಾ ನಿಮ್ಮ ಶರಣರು"

ಎಲ್ಲಕ್ಕಿಂತ ಹೆಚ್ಚಿನ ಮದ ಕುಲಮದ ಈ ದೇಹಕ್ಕೆ ಅಂಟಿ ಬಂದ ಕುಲದ ಅಹಂಕಾರವನ್ನು ಕಳೆದುಕೊಳ್ಳದ ಹೊರತು ಶರಣನಾಗುವುದಿಲ್ಲ. ಹಾಗೇ ಭಕ್ತನಾದವನು ಹಿಂದಿನ ಜನ್ಮಗಳ ಬಂಧನದಿಂದ ವಿಧಿವಶದಿಂದ ಮುಕ್ತನಾಗಿ ಲಿಂಗವಶನಾಗಬೇಕು. ಅಹಂಕಾರ ಐಶ್ವರ್ಯದ ಪೂರ್ವ ಸಂಬಂಧಗಳನ್ನು ಬಿಟ್ಟು ಶಿವಭಕ್ತ ಕಿಂಕಿರನಾಗಬೇಕು. ಹೆಪ್ಪು ಹಾಕಿದ ಹಾಲು ಮೊಸರಾಗಿ ತುಪ್ಪವಾಗುವಂತೆ, ಶರಣರನ್ನು ನಶ್ವರತೆಯನ್ನು ನೀಗಿ ಶಾಶ್ವತ ಮೌಲ್ಯಗಳನ್ನು ಪಡೆಯುತ್ತಾನೆ. ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ, ಭಕ್ತಿ, ಸಾಧನೆಯಿಂದ ಅವನು ತುಪ್ಪದಂತಾಗುತ್ತಾನೆ.

"ಉಪಮಿಸಲಾರದ ಉಪಮಾತೀತರು
ಕಾಲ ಕರ್ಮರಹಿತರು, ಭವವಿರಹಿನರು
ಕೂಡಲ ಸಂಗಮದೇವಾ ನಿಮ್ಮ ಶರಣರು

ಮೇಲಿನ ವಚನಭಾವ ಇಲ್ಲಿಯೂ ಮುಂದುವರಿದಿದೆ. ಉಪಮಾತೀತರು. ಅವರಿಗೆ ಅವರೇ ಸಮ ಅವರು ಕಾಲಕರ್ಮರಹಿತರು. ಕಾಲವನ್ನು ಮೀರಿದವರು. ಕರ್ಮಕ್ಕೆ ಅಂಟದವರು. ಕಾಲಕ್ಕೆ ಸಿಲುಕಿದ ಕರ್ಮಫಲವನ್ನು ಮೀರಿದವರು. ಇವುಗಳಿಂದ ಭವ ಬಂಧನವನ್ನು ಕಳೆದುಕೊಂಡವರು.

"ನೆಲನೊಂದೆ ಹೊಲಗೇರಿ-ಶಿವಾಲಯಕ್ಕೆ
ಜಲವೊಂದೇ ಶೌಚಾಚಮನಕ್ಕೆ
ಕುಲವೊಂದೆ ತನ್ನ ತಾನಜೆದವಂತೆ
ಫಲವೊಂದೆ ಷಡುದರುಶನ ಮುಕ್ತಿಗೆ
ನಿಲವೊಂದೆ ಕೂಡಲಸಂಗಮದೇವಾ, ನಿಮ್ಮನಜೆದವಂತೆ"

ಭೌತಿಕ ಭೇದಭಾವಗಳನ್ನೆಲ್ಲಾ ಶರಣನು ಮೀರಿ ನಿಲ್ಲುತ್ತಾನೆ. ತೋರಿಕೆಯ ಭೇದಗಳನ್ನೆಲ್ಲಾ ಅವನು ಮೀರಿದ್ದಾನೆ. ಏಕೆಂದರೆ ತೋರಿಕೆ ಹಿಂದಿರುವ ಅಭೇದ ದೃಷ್ಟಿ ಅವನಿಗೆ ಸಮನಿಸಿದೆ. ಹೊರನೋಟಕ್ಕೆ ವಸ್ತುಗಳು ಭಿನ್ನ ಭಿನ್ನವಾಗಿ ಕಂಡರೂ ಆಂತರ್ಯದಲ್ಲಿ ಅವು ಒಂದೇ ಹೊಲಗೇರಿಯ ನೆಲ ಶಿವಾಲಯದ ನೆಲ ಹೀಗೆ ನೆಲದಲ್ಲಿ ವ್ಯಾವಹಾರಿಕವಾಗಿ ಭೇದ ಕಂಡರೂ ನೆಲ ಮಾತ್ರ ಒಂದೇ. ಹಾಗೆಯೇ ಶೌಚಜಲ, ಆಚಮನ ಜನ ಎಂಬ ಭೇದ ಭಾಷೆಯನ್ನು ನಾವು ಬಳಸಿದರೂ ಜಲ ಮಾತ್ರ ಒಂದೇ.

ತಮ್ಮ ತಾವು ಅರಿತವರು ವ್ಯಾವಹಾರಿಕವಾಗಿ ಭಿನ್ನ ಭಿನ್ನ ಕುಲದವರಾಗಿ ಕಂಡರೂ ಅವರ ಕುಲಮಾತ್ರ ಒಂದೇ. ಅದು ಶಿವಕುಲ, ಹಾಗೆಯೇ ಷಡುದರ್ಶನಗಳ ಮುಕ್ತಿ ಸಾಧನೆಗಳು ಭಿನ್ನ ಭಿನ್ನವಾಗಿದ್ದರೂ ಆ ಮುಕ್ತರೂಪ ಫಲ ಮಾತ್ರ ಒಂದೇ. ಅದು ಶಿವಕುಲ. ಹಾಗೆಯೇ ಷಡುದರ್ಶನಗಳ ಮುಕ್ತಿ ಸಾಧನೆಗಳು ಭಿನ್ನ ಭಿನ್ನವಾಗಿದ್ದರೂ ಆ ಮುಕ್ತಿರೂಪ ಫಲ ಮಾತ್ರ ಒಂದೇ ಮುಕ್ತಿಗೆ ಬೇರೊಂದು ಫಲ ಇದೆ ಎಂದು ಇದರ ಅರ್ಥವಲ್ಲ. ಮುಕ್ತಿಯೇ ಫಲ ಎಂಬುದನ್ನು ಗಮನಿಸಬೇಕು. ಹೀಗೆ ಶರಣಸ್ಥಲಕ್ಕೆ ಬಂದಾಗ ಭೇದ ದೃಷ್ಟಿ ಬಯಲಾಗುತ್ತದೆ. ದೇವರನ್ನು ಅರಿತವರೆಲ್ಲರ ನಿಲವು ಒಂದೇ ಆಗಿರುತ್ತದೆ.

"ಪರಮತತ್ವದ ನಿಜ ಸಾಯುಕ್ತರ
ಅನು ನೀನೆಂದ ಶಬ್ದ ಸುಖಿಗಳ ತೋಱಾ ಎನಗೆ
ಮಹಾನುಭಾವರ ತೋಱಾ ಎನಗೆ
ಲಿಂಗಕ್ಯರ, ಲಿಂಗಸುಖಿಗಳ, ಲಿಂಗೂಡಾಗಿಪ್ಪವರ

> ಲಿಂಗಾಭಿಮಾನಿಗಳ ತೋಱಾ ಎನಗೆ
> ಅಹೋರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು
> ಕೂಡಲಸಂಗಮದೇವಾ"

ಪರಮತತ್ವದಲ್ಲಿ ಬೆರೆತು ಆನಂದಿಸುವವರನ್ನು ನಾನು ನೀನೆ ಎಂಬ ಸಮರಸ ಸುಖಿಗಖನ್ನು ತೋರಿಸು ಎಂದು ಶರಣರ ಲಕ್ಷಣಗಳನ್ನು ಹೇಳುತ್ತಿದ್ದಾರೆ. ಇವರು ಲಿಂಗೈಕ್ಯರು ಲಿಂಗಸುಖಿಗಳು, ಲಿಂಗಕ್ಕೆ ಆಲಯವಾಗಿರುವವರು, ಲಿಂಗಾಭಿಮನಿಗಳು ಇಂತಹವರ ಸೇವೆಯಲ್ಲಿ ನಿರಂತರವಾಗಿ ನಿಲ್ಲಿಸು ಎಂದು ಅನುಭವಿಗಳ ಸಂಗವನ್ನು ಹಾರೈಸುತ್ತಾರೆ.

> "ಅಯ್ಯೊ, ಸಜ್ಜನ ಸದ್ಭಾವರ ಸಂಗದಿಂದ
> ಮಹಾನುಭಾವರ ಕಾಣಬಹುದಯ್ಯಾ
> ಮಹಾನುಭಾವರ ಸಂಗದಿಂದ ಶ್ರೀ ಗುರುವನಱಿಯಬಹುದು
> ಲಿಂಗವನಱಿಯಬಹುದು ಜಂಗಮನಱಿಯಬಹುದು
> ಪ್ರಸಾದವನಱಿಯಬಹುದು, ತನ್ನ ತಾನಱಿಯಬಹುದು
> ಇದು ಕಾರಣ ಸದ್ಭಕ್ತರ ಸಂಗವನೆ ಕರುಣಿಸು
> ಕೂಡಲ ಸಂಗಮದೇವಾ ನಿಮ್ಮ ಧರ್ಮ"

ಸದ್ಭಕ್ತರ ಸಂಗವನ್ನೆ ಕರುಣಿಸು ಎಂಬ ಪ್ರಾರ್ಥನೆಯು ಇಲ್ಲಿಯೂ ಇದೆ. ಸದ್ಭಕ್ತರ ಸಂಗದಿಂದ ಮಹಾನುಭಾವರನ್ನು ಅಂದರೆ ಶಿವಯೋಗ ಸಾಧಕರನ್ನು ಕಾಣಬಹುದು. ಇವರ ಕರುಣೆಯಿಂದ ಗುರುಲಿಂಗ ಜಂಗಮ ಪ್ರಸಾದಗಳ ರಹಸ್ಯವನ್ನು ಕಂಡುಕೊಂಡು ಅದರಿಂದ ಕೊನೆಯಲ್ಲಿ ತನ್ನನ್ನು ತಾನೇ ಅರಿಯಬಹುದು. ಸುಖರಸಸುಖವನ್ನು ಪಡೆಯಬಹುದು. ಇದಕ್ಕೆಲ್ಲಾ ಸದ್ಭಕ್ತರ ಸಂಗವೇ ಕಾರಣವೆಂದು ಸತ್ಸಂಗದ ಮಹತ್ವವನ್ನು ಎತ್ತಿ ಹೇಳಿದ್ದಾರೆ.

> "ದಿಟವ ಮಾಡಿ ಪೂಜಿಸಿದಡೆ ಸಟಿಯ ಮಾಡಿ ಕಳವೆ
> ಸಟಿಯ ಮಾಡಿ ಪೂಜಿಸಿದಡೆ ದಿಟವ ಮಾಡಿ ಕಳೆವೆ
> ಏನೆಂಬೆ ಎಂತೆಂಬೆ? ಸುಖಕ್ಕೆ ತುಂಬಿದ ದೀವಿಗೆ ಮನೆಯೆಲ್ಲವ ಸುಟ್ಟಂತೆ
> ಅನು ಮಾಡಿದ ಭಕ್ತಿ ಎನಗಿಂತಾಯ್ತು ಕೂಡಲಸಂಗಮದೇವಾ"

ತಮ್ಮ ಭಕ್ತಿಯ ಪಡೆದ ಸಾರ್ಥಕತೆಯನ್ನು ಸಾಂಕೇತಿಕವಾಗಿ ಹೇಳುತ್ತಿದ್ದಾರೆ. ನಾನು ಮಾಡುತ್ತಿರುವ ಪೂಜೆಯೇ ದಿಟವೆಂದು ನಂಬಿದರೆ ಅದನ್ನು ಸಟೆಮಾಡಿ

ಕಳೆಯುತ್ತೀಯ ಅಂದರೆ ಇಷ್ಟಲಿಂಗವನ್ನು ಪೂಜಿಸುತ್ತಿದ್ದಾರೆ ಅದು ಭಿನ್ನ ಭಕ್ತಿಯೆಂದು ಕೈಕೊಳ್ಳದೆ ಬೇರ್ಪಡಿಸಿ ಬಿಡುತ್ತೀಯೆ ಇಷ್ಟಲಿಂಗವನ್ನು ಪ್ರಾಣಲಿಂಗದ ಹಂತಕ್ಕೇರಿಸಿ, ಜಂಗಮದಾಸೋಹ ಸಹಿತವಾಗಿ ಪೂಜಿಸಿದರೆ ಕಣ್ಣಿಗೆ ಕಾಣದಿರುವ ಪ್ರಾಣಲಿಂಗವನ್ನೇ ದಿಟಮಾಡಿ ಜಂಗಮ ಲಿಂಗನೇ ಸಾರ್ಥಕವೆಂದು ಮೆಚ್ಚುತ್ತಿಯೆ. ಬೆಳಕಿನ ಸುಖವನ್ನು ಅನುಭವಿಸಬೇಕೆಂದು ಹಚ್ಚಿದ ದೀಪ ಮನೆಯೆಲ್ಲವನ್ನು ಆವರಿಸಿ ಅದನ್ನೆ ಇಲ್ಲಗೈದಂತೆ ತಾನು ಮಾಡಿದ ಈ ಪೂಜೆಯೆಂಬ ಬೆಳಕು ನನ್ನನ್ನೇ ಆವರಿಸಿ ನುಂಗಿ ಹಾಕಿತು ಎಂದು ತಮ್ಮ ಬಕ್ತಿಯ ಸಾರ್ಥಕತೆಯನ್ನು ಹೃದಯತುಂಬಿ ಹೇಳಿಕೊಳ್ಳುತ್ತಿದ್ದಾರೆ.

"ಭಕ್ತನೆನಿಸುವೆಯ್ಯಾ ಮೆಲ್ಲ ಮೆಲ್ಲನೆ
ಯುಕ್ತನೆನಿಸುವೆನಯ್ಯಾ, ಮೆಲ್ಲ ಮೆಲ್ಲನೆ
ಸಾರಿ ಶರಣನೆನಿಸುವೆನಯ್ಯಾ ಮೆಲ್ಲ ಮೆಲ್ಲನೆ
ಎಡಹುಗುಳಿಗಳ ದಾಂಟಿ ಬರ ಬರ ಲಿಂಗೈಕ್ಯನೆನಿಸುವೆನಯ್ಯಾ
ಕೂಡಲಸಂಗಮದೇವಾ, ನಿಮ್ಮಿಂದಧಿಕನೆನಿಸುವೆನಯ್ಯಾ"

ನಿರಂತರ ಸಾಧನೆಯಿಂದ ಸಾಧಕ ಕ್ರಮೇಣ ವಿಕಾಸಗೊಳ್ಳುತ್ತಾ ಬೆಳೆಯಬೇಕೆಂಬುದನ್ನು ಹೇಳುತ್ತಾರೆ. ಭಕ್ತಿ ಸಾಧನೆ ಹಂತ ಹಂತವಾಗಿ ಮೇಲೇರುತ್ತಾ ಹೋಗುತ್ತದೆ. ಪ್ರಸಾಯುಕ್ತವಾದ ಸಾಧನೆಯಿಂದ ಶರಣಮಾರ್ಗದಲ್ಲಿ ಮುಂದುವರಿಯಬೇಕಾಗುತ್ತದೆ. ಮಧ್ಯದಲ್ಲಿ ಬರುವ ವಿಘ್ನ ಪರಂಪರೆಗಳಿಗೆ ಅಂಜದೆ ಅವುಗಳನ್ನು ದಾಟಬೇಕಾಗುತ್ತದೆ. 'ಎಡಹುಗಳಿಗಳು' ಎಂದು ಅವುಗಳನ್ನು ಕರೆದಿದ್ದಾರೆ. ಈ ಲೌಕಿಕ ವಿಷಯಾಕರ್ಷಣೆಗಳು ನಮ್ಮನ್ನು ಎಡವಿ ಬೀಳಿಸುವ ಹಳ್ಳಿಗಳು. ಅವುಗಳಲ್ಲಿ ಬೀಳದೆ ಅವುಗಳನ್ನು ದಾಟಿ ಶಿವನಲ್ಲಿ ಅವಿರಳವಾಗಿ ಬರೆಯಬೇಕು. ಅದು ಜೀವನ್ಮುಕ್ತ ಸ್ಥಿತಿ ಅದನ್ನೇ ಇಲ್ಲಿ ಲಿಂಗೈಕ್ಯ ಎಂದು ಕರೆದಿದ್ದಾರೆ. ಸಾಧಕನಿರಬೇಕಾದ ನಿರಂತರ ಜಾಗ್ರತ ಸ್ಥಿತಿಯನ್ನು ಇಲ್ಲಿ ಕಾಣುತ್ತೇವೆ.

"ತನುಮನಧನವೆಂಬ ಕನ್ನಡ ನೋಡಯ್ಯಾ;
ಎನ್ನದೂ ಅಲ್ಲ, ನಿನ್ನದೂ ಅಲ್ಲ, ಬಜೆಯ ಭ್ರಮೆಯಮಾತು
ಆ ಭ್ರಮೆಗೊಳಗಾಗೆ ನಿಮ್ಮ ಶ್ರೀ ಚರಣವ ಬಿಡೆ
ಕುಡಲಸಂಗಮದೇವಾ"

ತನುಮನಧನವೆಂಬ ಈ ತ್ರಿವಿಧಗಳು ಅಂದರೆ ಅರ್ಥ, ಪ್ರಾಣ, ಆಬಿಮಾನಗಳು ದರ್ಪಣದೋಪಾದಿಯಲ್ಲಿ ತೆರೆಮರೆಯಾಗಿಸುವು. ಇವೆಲ್ಲಾ ಬರಿ ತೋರಿಕೆಯವು

ಭ್ರಮೆಗೆ ಒಳಗು ಮಾಡುವಂತಹವು ಈ ಭ್ರಮೆಗೆ ಒಳಗಾದಂತೆ ಆತನ ಶ್ರೀ ಚರಣಕ್ಕೆ ಶರಣಾಗಿರುವುದನ್ನು ಇಲ್ಲಿ ಹೇಳುತ್ತಿದ್ದಾರೆ.

"ಮರನ ಹೂವ ಕೊಯಿದು ಮರಕ್ಕೇಱಿಸಿ
ನದಿಯುದಕವ ನದಗರ್ಪಿತವ ಮಾಡಿ
ಕಱುವನಗಲಿಸಿ ತಾಯಿ ಮುಱುಗಿಸಿ
ಮೊಲೆವಾಲ ಕಱಿದುರಾಬೇಡವೋ।
ಕೂಡಲಸಂಗಮದೇವ, ಮಾಡಿದ ಮಾಯೆ,
ಹಲಬರ ಬಾಯಿ ಟೊಣೆದೆ ಹೋಯಿತ್ತು.

ಪೂಜೆ ಕೆಲವು ಸಾಂಪ್ರದಾಯಿಕವಾಗಬಾರದು. ಆಧ್ಯಾತ್ಮಿಕ ತೃಷೆಯಿಂದ ಮೂಡಿ-ಬರಬೇಕು. ಮರದ ಹೂವನ್ನು ಮರಕ್ಕೆ ಅರ್ಪಿಸಿ ನೀರನ್ನು ಅರ್ಘ್ಯವೆಂದು ಅರ್ಪಿಸಿ ಪೂಜೆಯನ್ನು ಮಾಡಿ ಹಸುವಿನ ಹಾಲನ್ನು ಆ ತಾಯಿ ಮರುಗಿಸಿ ಕರುವನ್ನು ಅಗಲಿಸಿ ಆ ಕರುವಿಗೂ ಬಿಡದಂತೆ ಕರೆದೂ ಹೊಟ್ಟೆ ತುಂಬಾ ಕುಡಿದರೆ ಅದು ಪ್ರಸಾಧವಾಗುತ್ತದೆಯೇ? ಇಂತಹ ಪೂಜೆ ನರುಪಯುಕ್ತ ಭ್ರಾಂತಿಜನ್ಯ ಬಾಹ್ಯ ಕ್ರಿಯೆಗಳಿಂದಲೇ ಪೂಜೆಯಾಗುತ್ತದೆಂಬುದು ಭ್ರಮೆ. ಆದ್ದರಿಂದಲೇ ಉದ್ಧಾರವಾಗುತ್ತೇವೆ ಎನ್ನುವುದು ಅಜ್ಞಾನ. ಇದು ಅನೇಕ ಸಾಧಕರನ್ನು ಬೆನ್ನಟ್ಟಿ ಹಾರಿ ಹೊಡೆದು ವಶಪಡಿಸಿಕೊಂಡಿದೆ ಎಂದು ಎಚ್ಚರಿಸುತ್ತಿದ್ದಾರೆ.

"ಗ್ರಹ ಬಂದು ಆವರಿಸಲೊಡನೆ ತನ್ನ ಮಱೆಸುವುದು
ಮತ್ತೊಂದಕ್ಕಿಂಬುಗೊಡಲೀಯದಯ್ಯಾ
ಕೂಡಲಸಂಗಮದೇವನ ಅಱಿವು ಅನುಪಮವಾಗಲೊಡನೆ
ಈಬೆವಹಾರದೊಳಗಿರಲೀಯದಯ್ಯೊ"

ಶರಣ ಮರಳಿ ಮಾನವನಾಗನು ಎಂಬುದು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅರ್ಥ. ಗ್ರಹ ಬಂದು ಹೊಡೆದಾಗ ಅದೇ ಸರ್ವಸ್ವವನ್ನು ಆವರಿಸಿ ಆತನ ಸಹಜ ವರ್ತನೆಯನ್ನು ಮರೆಸಿಬಿಡುತ್ತಾರೆ. ಹಾಗೇ ಶಿವಾರ್ಚನೆಯಲ್ಲಿ ತೊಡಗಿ ಆತನ ಅರಿವಿನಿಂದ ಅನನ್ಯಭಾವ ಅಳವಟ್ಟಾಗ ವ್ಯವಹಾರವೆಲ್ಲಾ ಇಲ್ಲವಾಗುತ್ತದೆ. ತಾನು ತೊಡಗಿರುವುದನ್ನು ಮರೆಯುತ್ತಾನೆ. ಇದು ಭಾವಲಿಂಗದ ಅನುಸಂಧಾನ. ಇದು ಶಾಶ್ವತವಾಗಿರುವ ಸ್ಥಿತಿಯಲ್ಲ. ಅ ಕ್ಷಣದ ದೈವೋನ್ಮಾದ ಅನಂತರ ಅದರ ನೆನಪಿನಲ್ಲಿ ಬದುಕು ಬೆಳೆಯುತ್ತದೆ. ಬಯಸಿದಾಗ ಆ ವ್ಯವಸ್ಥೆಯನ್ನು ಅನುಭವಿಸುತ್ತವೆ. ಆ ಅವಸ್ಥೆ

ಇಳಿದು ಕೆಳಗ ಬಂದಾಗ ವ್ಯವಹಾರದಲ್ಲಿರುತ್ತವೆ. ಅವಸ್ಥೆ ತಾತ್ಕಾಲಿಕ ಅದರ ಅನುಭವ ನಿರಂತರ ಎಂಬುದನ್ನು ಕಂಡುಕೊಳ್ಳಬೇಕು.

"ಸತ್ಯವಿದೆ, ಸಮಾಧಾನವಿದೆ, ಮನಕ್ಕೆ ಬಾರದೀನಯ್ಯಾ?
ಸರ್ವ ಸಮುಮತವೆಂಬ ಸುಖವಿದೆ. ಮನಕ್ಕೆ ಸೋಂಕಬಿದೀನಯ್ಯಾ?
ಅ ನೀನೆಂಬುದೊವದು ಘನವಿದೆ
ಕೂಡಲಸಂಗಮದೇವಾ ಭ್ರಮೆಯಾ"

ಮನಸ್ಸಿನ ಅಳವಿಗೆ ನಿಲುಕದ ಅನುಭವದ ಹಂಬಲ ಇಲ್ಲಿ ಕಾಣುತ್ತದೆ. ಸತ್ಯದ ಅನುಭವವಾಗಿದೆ ಸಮಾಧಾನವಿದೆ. ಆದರೆ ಸಮರಸತೆ ಇಲ್ಲ. ಅನೀನೆಂಬುದೊಂದು ಘನವಿದೆ ಎಂಬಲ್ಲಿ 'ಆ' ಎಂಬುದನ್ನು ನಿರ್ದೇಶವಾಚಕವಾಗಿ ತೆಗೆದುಕೊಂಡು 'ನೀನೆಂಬುದೊಂದು ಘನವಿದೆ' ಎಂದಿಟ್ಟುಕೊಳ್ಳುವುದು ಹೆಚ್ಚು ಸೂಕ್ತ 'ನೀನು' ಎನ್ನುವ ಘನ ಅಂದರೆ ಪರಿಪೂರ್ಣವಸ್ತು ಒಂದಿದೆ. ಶರಣಿಗೆ ಅದೇ ಸೇವ್ಯ ಅದು ಸತ್ಯ ಸಮಾಧಾನ ರೂಪ ಮತ್ತು ಸರ್ವಸನುಮತ ಸುಖ. ಅದನ್ನು ಶರಣನೊಡುತ್ತಿದ್ದಾನೆ. ಮನಸ್ಸಿನ ಮೂಲಕ ಅದನ್ನು ಬೆರೆಯಲು ಪ್ರಯತ್ನಿಸುತ್ತಿದ್ದಾನೆ. ನಿಕಟ ಸಾಮೀಪ್ಯವಿದೆ. ಆದರೆ ಮನಸ್ಸಿನ ಮೂಲಕ ಅದನ್ನು ಕೊಡಲು ಸಾಧ್ಯವಿಲ್ಲ. ಹಾಗೆ ಮನಸ್ಸಿನ ಮೂಲಕ ಬೆರೆಯಬೇಕೆಂಬುದೇ ಭ್ರಮೆ ಮನಸ್ಸು ಹೋಗಿ ಅಮನವಾಗಬೆಕು. ಮನಸ್ಸನ್ನು ಬಿಟ್ಟು ಮೇಲೇರುವ ಅಮನಸ್ಕಸ್ಥಿತಿ ಅಳವಿಡಬೇಕು. ಇದು ಅಳವಡದೆ ಮನಸ್ಸಿನ ಮೂಲಕ ಕೊಡಬೆಕೆಂಬುದೇ ಒಂದು ಭ್ರಮೆ ಎಂಬುದನ್ನು ಇಲ್ಲಿ ಸೂಚಿಸುತ್ತಿದ್ದಾರೆ.

'ಮೂಱುಱೌಪ್ಯಾಯನ ಐದು ಬೆಟ್ಟವನಿಂಬುಗೊಂಡುದು
ಅಕಟಕಟಾ, ಮಾಡಿಕೆಟ್ಟರು, ಮಾಡದೆ ಕೆಟ್ಟರು
ನೀಡಿ ಕೆಟ್ಟರು ನೀಡದೆ ಕೆಟ್ಟರು
ಕೂಡಲಸಂಗಮದೇವನ ಬಸುಱಮಧ್ಯವ
ಬಯಲು ಸಮಾಧಿಯಲಿಕ್ಕದೆ ಕೆಟ್ಟರು'

ಗುರು, ಲಿಂಗ ಜಂಗಮಕ್ಕೆ ಸಲ್ಲಬೇಕಾದ ಅಪ್ಯಾಯನ ಅಂದರೆ ದ್ರವ್ಯ ಅಥವಾ ತನುಮನ ಧನಗಳು, ಪಂಚೇಂದ್ರಿಯಗಳ ಉಪಯೋಗಕ್ಕಾಗಿ ವಿನಿಯೋಗವಾದವು. ಹೆಣ್ಣು, ಹೊನ್ನು ಮಣ್ಣುಗಳಿಗಾಗಿ ಪಂಚೇಂದ್ರಿಯಗಳಿಗಾಗಿ ಮಾಡಿ ಕೆಟ್ಟರು. ಗುರು ಲಿಂಗ ಜಂಗಮಕ್ಕೆ ಮಾಡದೆ ಕೆಟ್ಟರು. ನೀಡದೆ ಕೆಟ್ಟರು ನಿಡಿದರೂ ಅರ್ಪಿತಭಾವದಿಂದ ನೀಡಿದೆ ಅಹಂಭಾವದಿಂದ ನೀಡಿ ಕೆಟ್ಟರು. ಮಾಡುವ ಕ್ರಿಯೆಗಳು ಸಾಧನೆಗೆ

ಉಪಯೋಗವಾಗದೇ ಹೋದರೂ ಅದು ಕೆಟ್ಟಂತೆ. ಆದುದರಿಂದ ನೀಡಿಯೂ ಕೆಟ್ಟರು, ನೀಡದೆಯೂ ಕೆಟ್ಟರು ಎಂದ ಮಾತು ಅರ್ಥವತ್ತಾಗಿದೆ. ಕೂಡಲಸಂಗಮದೇವನ ಒಡಲೊಳಗೆ ಪ್ರವೇಶಿಸಿ ಬಯಲಾಗಬೇಕು. ಅದಾಗದೆ ಹೋದರೆ ಎಲ್ಲವನ್ನು ಮಾಡಿಯೂ ಕೆಟ್ಟಂತಾಗುತ್ತಾರೆ. ಮೂರು ಉಳಿಯದ ರೀತಿಯಲ್ಲಿ ಅರ್ಪಿಸಬೇಕು. ತನು ಮನ ಧನ ಈ ಮೂರು ವಸ್ತುಗಳ ಭಾವ ಇರುವವರೆಗೂ ಐಕ್ಯತೆ ಸಾಧ್ಯವಿಲ್ಲವೆಂಬುದನ್ನು ಸೂಚಿಸುತ್ತಿದ್ದಾರೆ.

"ದೇವಲೋಕ ಮರ್ತ್ಯಲೋಕವೆಂಬ ಸೀಮೆಯೊಳ್ಳನ್ನಕ್ಕ
ಕೇವಲ ಶರಣನಾಗಲರಿಯಲು!
ಸತ್ತು ಬೆರಸಿಗೆನೆಂದಡೆ ಕಬ್ಬಿನ ತುದಿಯ ಮಲಿದಂತೆ
ಕೂಡಲ ಸಂಗಮದೇವಾ"

ದೇವಲೋಕ ಮರ್ತ್ಯಾಲೋಕಗಳು ಬೇರೆ ಬೇರೆ ಎಂಬ ಭಾವವಾಗಲೀ ಒಂದಕ್ಕಿಂತ ಇನ್ನೊಂದು ಶ್ರೇಷ್ಠವೆಂಬ ತಾರತಮ್ಯ ದೃಷ್ಟಿಯಾಗಲೀ ಶರಣನಿಗಿಲ್ಲ ಎಂಬುದು ಇಲ್ಲಿ ಎದ್ದು ಕಾಣಬಹುದಾದ ಒಂದು ಅರ್ಥ. ಆದರೆ ಮೀರಿ ಶುದ್ಧಿಶರಣನ ಸಮರಸ ನಿಲುವನ್ನು ಇದು ಧ್ಯಾನಿಸುತ್ತದೆ. ದೇವಲೋಕ ಎಂದರೆ ಲಿಂಗ, ಮರ್ತ್ಯಾಲೋಕ ಎಂದರೆ ಅಂಗ. ಇವುಗಳಲ್ಲಿ ಸೀಮೆ ಎಂದರೆ ಭೇದ, ಅಂಗ–ಲಿಂಗಗಳಲ್ಲಿ ಭಿನ್ನವಾದ ಇರುವವರೆಗೂ ಆತ ಸಮಾನಾನುಭವದ ಶರಣನಾಗಲಾರ. ಸಾಯುವವರೆಗೂ ಈ ಭೇದವನ್ನುಳಿದುಕೊಂಡು ಸತ್ತನಂತರ ಬೆರೆತು ಸಾಮರಸ್ಯವನ್ನು ನಡೆಯುತ್ತದೆನ್ನುವುದು ಕಬ್ಬಿನ ತುದಿಯನ್ನು ಮೆಲೆದಂತೆ ಅಂದರೆ ಅದರಲ್ಲಿ ರಸವಿಲ್ಲ. ರುಚಿಯಿಲ್ಲ ಜೀವನ್ಮುಕ್ತಸ್ಥಿತಿಯಲ್ಲಿ ಸಾಮರಸ್ಯದ ಅಂತಿಮ ನಿಲವನ್ನು ಕಾಣಬೇಕೆಂಬುದನ್ನು ಇಲ್ಲಿ ಹೇಳುತ್ತಿದ್ದಾರೆ.

ಭಕ್ತಿ ಆಚರಣೆಗೆ ಸುಲಭವೆಂದ ಬಸವಣ್ಣನವರು ಭಾವಿಸಲಿಲ್ಲ. "ಭಕ್ತಿಯೆಂಬುದ ಮಾಡಬಾರದು, ಗಂಗಸದಂತೆ ಹೋಗುತ್ತಾ ಕೊಯ್ವುದು. ಬರುತ್ತಾ ಕೊಯ್ವದು ಘಟಸರ್ಪದಲ್ಲಿ ಕೈ ದುಡಿಕಿದರೆ, ಹಿಡಿಯುವದು ಮಾಟುದೇ" ಎಂದು ಎಚ್ಚರಿಸುತ್ತಾರೆ.

ತಮ್ಮ ಅನುಭವವನ್ನು ನಿವೇದಿಸುತ್ತಾ "ನೆತ್ತಿಯಲ್ಲಿ ಅಲಗುತಿರುಹುವಂತಪ್ಪ ವೇದನೆಯಂತ್ರನೆನಗೆ ಕೊಯ್ದ ಮೂಗಿಂಗೆ ಕನ್ನಡಿಯ ತೋರುವಂತಪ್ಪ ವೇದನೆವುದೆನಗೆ ಎಂದಿದ್ದಾರೆ. ಹಾಗೂ ಭಿತ್ತಿಯೋಗಾನುಷ್ಠಾನಕ್ಕೆ ಗುರುಕರುಣೆ, ಜಂಗಮಕಲಾಕ್ಷ ಅತ್ಯಾವಶ್ಯಕವಾಗಿದೆ".

"ಮಡಕೆಯ ಮಾಡುವರೆ ಮಣ್ಣೆ ಮೊದಲು
ತೊಡಿಗೆಯ ಮಾಡುವರೆ ಹೊನ್ನೇ ಮೊದಲು
ಶಿವಪಥವನಿರವಡೆ ಗುರುಪಥವೇ ಮೊದಲು
ಕೂಡಲಸಂಗಮದೇವನರಿವುದಕ್ಕೆ ಶರನರ ಸಂಗವೇ ಮೊದಲು"

"ಗುರುವಚನದಿಮದಲ್ಲದೆ ಲಿಂಗವೆಂದೆನಿಸದು
ಗುರುವಚನದಿಂದಲ್ಲದೆ ನಿತ್ಯವೆಂದೆನಿಸದು
ಗುರುವಚನವಿಂದಲ್ಲದೆ ನೇಮವೆಂದೆನಿಸದು
ತಲೆಯಿಲ್ಲದಟ್ಟಿಗೆ ಪಟ್ಟ ಕಟ್ಟುವ ಉಭಯ ಭ್ರಷ್ಟರ
ಮೆಚ್ಚುವನೇ ನಮ್ಮ ಕೂಡಸಂಗಮದೇವ"

ಗುರುವಿನ ಸ್ಥಾನ ಅಭೂತಪೂರ್ವವಾದುದು ಅವನು ದೇವರಿಗಿಂತಲೂ ದೊಡ್ಡವನು, ದೇವರನ್ನು ಮರೆತರೂ ಚಿಂತೆಯಿಲ್ಲ ಗುರುವನ್ನು ಮರೆಯಲಾಗದು, ಗುರುವಿಗೆ ಸರ್ವಸ್ವವನ್ನು ಅರ್ಪಿಸಿ ಅವನ ಒಲವನ್ನು ದೊರಕಿಸಿಕೊಳ್ಳಬೇಕು.

ಗುರು ದೊಡ್ಡವನೆಂದು ವೇದ ವೇದಾಂತಗಳೂ ಸಾರಿದವು ಗುರುವೇ ಬ್ರಹ್ಮ, ವಿಷ್ಣು, ಮಹೇಶ್ವರ– ಅವನೇ ಸಾಕ್ಷಾತ್ ಪರಬ್ರಹ್ಮ ನಿಜದ ತಿರುಳನ್ನು ತಿಳುಹಲು ಅವನೇ ಸಮರ್ಥ ಮಾನವನ ಅಂತಿಮ ಶಾಂತಿಯನ್ನು ದೊರಕಿಸಲು ಅವನಿಂದಲೇ ಸಾಧ್ಯ ಎಂದು ಹೇಳಿದ್ದವು. ಹಬ್ಬ ಯುಗಾದಿಗಳ ನೆಪದಿಂದ ಪ್ರಾಣಿವಧೆ ಮಾಡುವವರನ್ನು ಕಂಡರೆ ಬಸವಣ್ಣನವರಿಗೆ ಕೋಪ ಕೆರಳುತ್ತದೆ. ನಿರಪರಾಧಿಗಳಾದ ಮೂಕಜೀವಿಗಳನ್ನು ಕಾಣದ ಸುಳ್ಳುದೇವರನ್ನು ಮುಟ್ಟಿಸುವುದಕ್ಕೆ ಬಲಿ ಕೊಡುವುದು ಮಹಾಪಾಪವೆಂದು ಅವರ ವಾದ ವದಾಸ್ತಂಭಕ್ಕೆ ಬಿಗಿಯಲ್ಪಟ್ಟಿರುವ ಮೂಕ ಜೀವಿಗಳನ್ನು ನೋಡುತ್ತಾ ನೋಡುತ್ತಾ ಕರುಣೆ ಕಣ್ಣೀರಾಗಿ ಹರಿಯುತ್ತದೆ.

"ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೇ ಅಳು ಕಂಡ್ಯಾ
ವೇದವನೋದಿದವರ ಮುಂದೆ ಅಳು ಕಂಡ್ಯಾ
ಶಾಸ್ತ್ರವನೋದಿದವರ ಮುಂದೆ ಆಳು ಕಂಡ್ಯಾ
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವಾ"

ಸರ್ವ ಜೀವರುಗಳ ತಂದೆಯಾದ ಸಂಗನಿಗೆ ಈ ಜೀವ ಹಿಂಸೆ ಪ್ರಿಯವೇ? ಪ್ರಾಣಿವಧೆಯನ್ನು ಓಸರಿಸುವ ವೇದ ಅವನ ವಾಣಿಯೇ? ಅಣುರೇನು ತೃಣಕಾಷ್ಠಗಳಲ್ಲಿ ಹುದುಗಿರುವ ಪರಮಾತ್ಮ ಯಜ್ಞಪಶುಗಳ ಹೊಂಗಿನಹನೆ? ಹರನ

ಕಾರುಣ್ಯವನ್ನು ದೊರಕಿಸುವುದಕ್ಕೆ ಕುರಿಯ ಮಧ್ಯಸ್ಥಿಕೆ ಬೇಕೆ? ಹರ ಮುಳಿದವರ ಕುರಿ ಸತ್ತು ಕಾಯ್ವುದೇ ಶಾಸ್ತ್ರದ ನಿಷ್ಕರಣ ಶಾಸನ ಹಿರಿದೋ ಹೃದಯದ ಕಾರುಣ್ಯವಾಣಿ ಹಿರಿದೋ ಎಂಬ ಮಹತ್ವದ ಪ್ರಶ್ನೆಗಳನ್ನು ಬಸವಣ್ಣನವರೆತ್ತುತ್ತಾರೆ. ನಮ್ಮದೆಂದು ವೇದ ಪುರಾಣಗಳನ್ನು ಮನ್ನಿಸಬೇಕೇನು? ನಮ್ಮ ಹಿತ್ತಲಿನಲ್ಲಿ ಬೆಳೆದದ್ದೆಂದು ಕಳ್ಳಿಯ ಹಾಲನ್ನೇಕೆ ಕುಡಿಯಬಾರದು ಎಂದು ಹೇಳುತ್ತಾರೆ.

ಹಿಂಸಾತ್ಮಕವಾದ ಕೆಲವು ಆಚರಣೆಗಳ ಪ್ರತೀಕವಾಗಿ ವೇದ ಪುರಾಣಗಳಲ್ಲಿ ಪಾಪ, ಪುಣ್ಯ, ಸ್ವರ್ಗ, ನರಕ ಕಲ್ಪನೆಗಳು ಬೆಳೆಯುತ್ತಾ ಬಂದವು. ಒಂದು ಸಟೆಯನ್ನು ಸಾಧಿಸಹೋಗಿ ಪುರಾಣಕಾರರು ಭಾರತೀಯ ಜೀವನವನ್ನೆಲ್ಲಾ ಸಟೆಯ ಸಾಮ್ರಾಜ್ಯವನ್ನಾಗಿ ಮಾಡಿಬಿಟ್ಟಿದ್ದಾರೆ. ರಾಜಶಾಸನ, ಮಠಶಾಸನ, ರೂಢಿ ಶಾಸನಗಳು ಇವುಗಳನ್ನು ಪೋಷಿಸಿಕೊಂಡು ಬಂದು ಸಮಾಜವನ್ನು ಕತ್ತಲೆಯಿಂದ ಕಗ್ಗತ್ತಲೆಗೆ ಒಯ್ದಿವೆ. ಬಸವಣ್ಣನವರಂತಹ ವಿಚಾರವಾದಿಗಳು ಅವುಗಳನ್ನು ಪ್ರತಿಭಟಿಸಿ ಅವುಗಳ ಕಾಠಿಣ್ಯತೆಯನ್ನು ಕರಗಿಸುತ್ತ ಬಂದಿದ್ದಾರೆ. ಇಂದು ಸಜೀವ ಪ್ರಾಣಿಹತ್ಯೆಯ ಬದಲು ಪಿಷ್ಟಪ್ರಾಣಿಯಿಂದ ವೇದಾಭಿಮಾನಿ ದೇವತೆಗಳು ತೃಪ್ತರಾಗುತ್ತಾರೆ. ಪಿಷ್ಟವೇ ಆಗಲಿ ಸಜೀವ ಪ್ರಾಣಿಯೇ ಆಗಲಿ ವಧೆಗೊಳ್ಳಬೇಕಾದ ಅಗತ್ಯವೇನು ಎಂದು ಮೂಲ-ಸ್ತಂಭವನ್ನೇ ಹಿಡಿದು ಬಸವಣ್ಣನವರ ಜಗ್ಗಿಸಿದ್ದಾರೆ. ಅವರು ಖಂಡಿಸುತ್ತಿರುವುದು ಯಜ್ಞಯಾಗಾದಿಗಳ ಹಿಂದಿರುವ ಜೀವ ಹಿಂಸೆಯ ಮನೋಭಾವವನ್ನು.

ಒಮ್ಮೆ ಗಂಗೆಯಲ್ಲಿ ಮುಳುಗುವರಿಗೆ ಅಪಾರ ದೊರೆಯುವುದಾದರೆ ಗಂಗೆಯಲ್ಲಿಯೇ ಇರುವ ಮತ್ಸ್ಯ, ಕೂರ್ಮ, ಮಂಡೂಕಗಳೆಷ್ಟು ಪುಣ್ಯಭಾಗಿಗಳಾಗಿರ-ಬೇಕು. ಆದ್ದರಿಂದ "ಸತ್ಯಶಾಚವ ನೇಮದ ತಪ್ಪದೆ ಮಾಡಬಲ್ಲರೆ, ಅದು ಲೇಸು ಎಂದು ಬಸವಣ್ಣನವರ ಅಭಿಪ್ರಾಯ.

ನೇಮ ನಿಷ್ಠೆಗಳು ಒಂದು ಕಾಲದಲ್ಲಿ ಸಾಧಕನಲ್ಲಿ ಸಂಯಮವನ್ನು ಸ್ಥಾಪಿಸುವುದಕ್ಕೆ ನಿಯೋಜಿಸಲ್ಪಟ್ಟವು. ತನಗೆ ಅತ್ಯಂತ ಪ್ರಿಯವಾದ ವಸ್ತುವನ್ನು ಬಿಡುವ ಮನಃಸ್ಥೈರ್ಯವೇ ನೇಮವೆನಿಸುತ್ತಿತ್ತು. ಅದು ಬರಬರುತ್ತಾ ಕಲ್ಪನೆಗೆಡೆಕೊಟ್ಟು ತನಗೆ ಬೇಡದ ವಸ್ತುವನ್ನು ದೇವರ ಹೆಸರಿನಲ್ಲಿ ಮಾನವ ಬಿಡುತ್ತಾ ಬಂದ ಎಂದು ತಿಳಿಸುತ್ತಾರೆ.

"ಎಲ್ಲವು ಬೇಡಿದರೆಮ್ಮನವರು ಒಂದ ಬೇಡ ಮಱೆದರಯ್ಯಾ!
ಮರ್ತ್ಯಲೋಕದ ಗಣಂಗಳ ಒಂದ ಬೇಡ ಮಱೆದರು
ಕೂಡಲಸಂಗಮದೇವಾ ಎನ್ನ ಬೇಡ ಮಱೆದರು"

ಶರಣರು ನನ್ನ ತನುಮನಧನ ಎಲ್ಲವನ್ನು ಬೇಡಿದರು. ಆದರೆ ಒಂದನ್ನು ಮಾತ್ರ ಮರೆತರು 'ಎನ್ನಬೇಡ ಮರೆತರು' ಅಂದರೆ 'ನಾನು' ಎಂಬುದನ್ನು ಬೇಡಲು ಮರೆತರು ಆದ್ದರಿಂದ 'ನಾನು' ಎನ್ನುವುದು ಮಾತ್ರ ನನ್ನಲ್ಲಿ ಉಳಿದಿತ್ತು. ಶಿವನಿಗೆ ಅದನ್ನು ಅರ್ಪಿಸಿ ನಾನೇ ಆತನಾದೆ ಎಂದು ತಾವೇ ಲಿಂಗ ಸ್ವರೂಪಿಯಾಗಿ ಪರಿಣಮಿಸುವ ಐಕ್ಯತೆಯ ನಿಲುವನ್ನು ಇಲ್ಲಿ ಹೇಳುತ್ತಿದ್ದಾರೆ.

"ತಂದೆ ಮಕ್ಕಳಿಗೆ ಬುದ್ಧಿ ಹೇಳುವಲ್ಲಿ
ಅವಗುಣಕ್ಕೆ ಮನಿವಲ್ಲದೆ ಪ್ರಾಣಕ್ಕೆ ಮುನಿಯ
ಲಿಂಗವಂತನು ಲಿಂಗವಂತರಿಗೆ ಬುದ್ದಿ ಹೇಳುವಲ್ಲಿ
ಅವಗುಣಕ್ಕೆ ಮುನಿವಿಲ್ಲದೆ ಲಾಂಛನಕ್ಕೆ ಮುನಿಯ
ಲಿಂಗ ಭಕ್ತನು ಲಿಂಗಪಥದ ಹೇಳಿದರೆ
ಮತ್ಸರಿಸುವವರ ಮೆಚ್ಚಿ ಕೂಡಲಸಂಗಮದೇವ"

ಶಿವ ಮೆಚ್ಚುವ ರೀತಿಯನ್ನು ಈ ವಚನದಲ್ಲಿ ವಿವರಿಸಿದ್ದಾರೆ. ಸಮಾಜದ ಉನ್ನತಿಯನ್ನು ಮಾಡಬಯಸುವರು. ಜನರು ದುರ್ಗುಣಗಳನ್ನು ಸದುಪದೇಶದಿಂದ ದೂರ ಮಾಡಬೇಕು. ಅವಗುಣ ಅನಾಚಾರವನ್ನು ನಿಂದಿಸಬೇಕು. ಮಕ್ಕಳ ದೃಷ್ಟಗುಣವನ್ನು ಹೊಂದಿದರೆ ಅವರನ್ನು ತಂದೆಯು ದುರ್ಗುಣ ನಾಶಪಡಿಸಲು ಪ್ರಯತ್ನಿಸುವನು. ಮಕ್ಕಳನ್ನು ಕೊಲ್ಲಲು ಬಯಸುವುದಿಲ್ಲ. ಲಿಂಗವಂತನು ಲಿಂಗವಂತ ದುಷ್ಟರಿಗೆ ಉಪದೇಶ ಮಾಡುತ್ತಾನೆ. ದುಷ್ಟತನ ನಿವಾರಿಸುತ್ತವೆ. ಶಿವ ಲಾಂಛನಗಳನ್ನು ನಿರಾಕರಿಸಬಯಸುವುದಿಲ್ಲ. ಲಿಂಗಾಚಾರಗಳನ್ನು ಹೇಳುವ ಉಪದೇಶಕನಿಗೆ ಯಾರು ಮತ್ಸರ ಮಾಡುವರೋ ಅಂತಹವರನ್ನು ಲಿಂಗದೇವ ಮೆಚ್ಚುವುದಿಲ್ಲ. ತಮ್ಮಲ್ಲಿಯೇ ದೋಷವನ್ನು ಇಟ್ಟುಕೊಂಡು ಉಳಿದವರ ತಪ್ಪನ್ನು ತಿದ್ದುವವರಿಗೆ ಬಸವಣ್ಣನವರು ಈ ವಚನದಲ್ಲಿ ಉತ್ತಮವಾಗಿ ಮಾರ್ಗದರ್ಶನ ನೀಡಿದ್ದಾರೆ. ಲೋಕದ ಡೊಂಕನ್ನು ತಿದ್ದುವ ಮೊದಲು ನಿಮ್ಮ ಶರೀರದ ಮನಸ್ಸು ಸಂತೈಸಿಕೊಳ್ಳಿರಿ ಪಕ್ಕದ ಮನೆಯವರ ದುಃಖಕ್ಕೆ ಅಳುವವರ ಢಾಂಬಿಕ ಜೀವನವನ್ನು ಕೂಡಲಸಂಗಮದೇವನು ಮೆಚ್ಚುವುದಿಲ್ಲ.

'ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅವುದೆನ್ನಬೇಕು'

ಮಾತಿನ ಅಥವಾ ವಚನದ ಶಿಲ್ಪವನ್ನು ಕುರಿತು ಜಿಜ್ಞಾಸೆ ಇಲ್ಲದೆ ಬಿಜ್ಜಳನ ಬೊಕ್ಕಸಕ್ಕೆ ಬರುತ್ತಿದ್ದ ಸಾಮಾಗ್ರಿಗಳ ಬೆಳಕಟ್ಟಿ ಅಭ್ಯಾಸವಾಗಿದ್ದ ಬಸವಣ್ಣ ಇಲ್ಲಿ ವಚನ ಭಂಡಾರಕ್ಕೆ ಬಂದು ಬೀಳಬೇಕಾದ ಧಾತುಗಳನ್ನು ಅದೇ ಪ್ರವೃತ್ತಿಯಿಂದ ನೋಡುತ್ತಿದ್ದಾನೆ. ಮುತ್ತಿನಹಾರ ಎಂಬ ಮಾತು ರಚನೆಯ ಬಂಧವನ್ನು ಕುರಿತಾದದ್ದು ವಿಚಾರಗಳನ್ನು ಹರಳಗಟ್ಟಿಸಿದ ಮಾತಿನ ಪೂಣಿಕ ಶಬ್ದ ಜೊಡಣೆಯ ತಂತ್ರ. ಹೊಳಪು ಕೊಡುವಿಕೆ ಮೊದಲಾದ ಶಬ್ದ ಪರಿಕರಗಳನ್ನು ಇದು ಸೂಚಿಸುತ್ತದೆ. "ಮಾಣಿಕ್ಯದ ದೀಪ್ತಿ ಶಬ್ದಗಳು ಹೊರಚೆಲ್ಲುವ ಕಾಂತಿ, ಪಡೆಯಬೇಕಾದರೆ ಅಂದಾದ ಮೈಕಟ್ಟು ಮೊದಲಾದವುಗಳನ್ನು ಧ್ವನಿಸುತ್ತದೆ. ಸ್ಫಟಿಕದ ಶಲಾಕೆಯು ರಚನೆಯು ಸಾಷ್ಟನ ಗಡುಸುತನ ಸಾವಯವ ಸಿದ್ದಿ ನಿರ್ವಲತೆ ಮೊದಲಾದ ರಚನೆ ಶೈಲಿಯನ್ನು ನೆನಪಿಸಿ ಮಾತಿನ ಮತ್ತು ನಡತೆಯ ಮೌಲ್ಯ ತಿಳಿಸುತ್ತಾನೆ.

"ಬೆಲ್ಲವ ತಿಂದ ಕೋಡಗನಂತೆ ಸಿಹಿಯ ನೆನೆಯದಿರಾ ಮನವೆ
ಕಚ್ಚಿತಿಂದ ನರಿಯಂತೆ ಹಿಂದಕ್ಕೆಳದಿರಾ ಮನವೇ
ಗಗನವನಡರಿದ ಕಾಗೆಯಂತೆ ದೆಸೆ ದೆಸೆಗೆ ಹಂಬಲಿಸುವಿರಾ ಮನವೇ
ಕೂಡಲಸಂಗನ ಶರಣರ ಕಂಡು ಲಿಂಗವಂದೆ ನಂಬು ಮನವೇ

ಮನಸ್ಸಿಗೆ ಹಿತವಚನವನ್ನು ಬಸವಣ್ಣನವರು ಈ ವಚನದಲ್ಲಿ ವಿವರಿಸಿದ್ದಾರೆ. ಹಿಂದೆ ಯಾವಾಗಲೂ ಬೆಲ್ಲ ತಿಂದ ಮಂಗವು ಆದರ ಸವಿ ನೆನಪಿಸಿ ಕೊಂಡಂತೆ, ಕಟ್ಟು ತಿಂದು ಕಾವಲಗಾರನಿಂದ ಹೊಡೆತ ತಿಂದ ನರಿಯಂತೆ ಪ್ರಪಂಚ ಸುಖವನ್ನು ನೆನಯಬೇಡ ಮನವೇ ಆಕಾಶದಲ್ಲಿ ಹಾರಾಡುವ ಕಾಗೆ ದಿಕ್ಕು ದಿಕ್ಕುಗೆ ಹೋಗಲು ಹಂಬಲಿಸಿದಂತೆ ಮಾಡಬೇಡ ಮನಸ್ಸೆ ಕೂಡಲಸಂಗನ ಶರಣರನ್ನು ಕಂಡಾಗ ಅವರೇ ಲಿಂಗದೇವನೆಂದ ನಂಬು ಎಂದು ಹಿತವಾಗಿ ನುಡಿದಿದ್ದಾರೆ.

ಮಾಡಿದೆನೆಂಬುದು ಮನದಲ್ಲಿ ಹೊಳೆದಡೆ
ಏಡಿಸಿ ಕಾಡಿತ್ತು ಶಿವನ ಡಂಗುರ
ಮಾಡಿದೆ ನೆನ್ನದಿರಾ ಲಿಂಗಕ್ಕೆ

ಮಾಡಿದೆನೆನ್ನದಿರಾ ಜಂಗಮಕ್ಕೆ
ಮಾಡಿದೆನೆಂಬುದು ವಚನದಲ್ಲಿದ್ದಡೆ
ಬೇಡಿದ್ದ ನೀರಿನ ಕೂಡಲಸಂಗಮದೇವ

ಅಹಂಕಾರ ವಿನಾಶಕ್ಕೆ ಮೂಲವಾಗುವುದು. ನಾನು ಮಾಡಿದೆ ಎಂಬ ಭಾವ ಮೂಡಿದರೆ ಶಿವನ ಡಂಗುರವು ಕಾಡಿಸಿ ಅವಹೇಳನ ಮಾಡುವದು. ಲಿಂಗಕ್ಕೆ ಜಂಗಮಕ್ಕೆ ಅನುಕೂಲವಾಗುವಂತೆ ಮಾಡಿದ ಕಾರ್ಯವನ್ನು 'ನಾನು ಮಾಡಿದೆ' ಎನ್ನಬಾರದು ಅದೆಲ್ಲ ದೇವನ ಕೃಪೆ ನಾನು ಕೇವಲ ನೆಪಮಾತ್ರ ಎಂಬುದನ್ನು ತಿಳಿದರೆ ಕೂಡಲಸಂಗದೇವನು ಅಂತಹ ಶರಣರಿಗೆ ಬೇಡಿದ್ದನ್ನು ಕೊಡುವನು ಎಂದಿದ್ದಾರೆ ಬಸವಣ್ಣನವರು.

"ಅಕಟಕಟಾ! ಶಿವ ನಿನಗಿನಿತು ಕರುಣವಿಲ್ಲ
ಅಕಟಕಟಾ! ಶಿವ ನಿನಗಿನಿತು ಕೃಪೆಯಿಲ್ಲ
ಯಾಕೆ ಹುಟ್ಟಿಸಿದೆ ಇಹಲೋಕ ದುಃಖಿಯಾ? ಪರಲೋಕದೊರನ?
ಯಾಕೆ ಹುಟ್ಟಿಸಿದೆ ಕೂಡಲಸಂಗಮದೇವ ಕೇಳಯ್ಯಾ
ಎನಗಾಗಿ ಮತ್ತೊಂದು ತರು ಮರಂಗಳಿದ್ದಿಲ್ಲವೇ?

ಭಕ್ತನಾಗಿ ಬಸವಣ್ಣನವರು ಶಿವನಲ್ಲಿ ಈ ಲೋಕದಲ್ಲಿ ಬಹುದುಃಖದಿಂದ ಇರುವಂತೆ ಯಾಕೆನ್ನ ಹುಟ್ಟಿಸಿದೆ? ಆಶಾ ಪಾಶದಿಂದಾಗಿ ನಾನು ಗಿಡಮರಗಳಿಗಿಂತಲೂ ಕಡಿಮೆ-ಯಾದವ ಗಿಡಗಳಾದರೊ ನೆರಳು ಕೊಟ್ಟು ಉಪಕಾರ ಮಾಡುತ್ತವೆ. ಇಹಪರ-ಗಳಿಂದಾಗಿ ದೂರವಿರುವ ಮನುಷ್ಯನನ್ನಾಗಿ ಏಕೆ ಹುಟ್ಟಿಸಿದೆ ಅಯ್ಯಾ! ನನ್ನ ಮೇಲೆ ಸ್ವಲ್ಪವೂ ಕರುಣೆಯಿಲ್ಲವೇ? ಇಹಪರಗಳಲ್ಲಿ ಸುಖ ಹೊಂದಲಾರದವನಾಗಿ ನಾನಾಗು-ವಂತೆ ಏಕೆ ಮಾಡಿದೆ? ಕೂಡಲಸಂಗಮದೇವ ಎನ್ನ ಜನ್ಮವೇ ವ್ಯರ್ಥವಾಯಿತು. ಕರುಣೆತೋರು ಈ ಲೋದಲ್ಲಿ ದುಃಖ ಹೊಂದುತ್ತಾ ಪರಲೋಕದಲ್ಲಿ ಸುಖ ಪಡೆದಂತೆ ಏಕೆ ಮಾಡಿದೆ? ಎಂದೂ ನೈತಿಕ ಪ್ರಜ್ಞೆಯ ಕಡೆಗೆ ಹೋಗಲು ಹಂಬಲಿಸುತ್ತಿದ್ದಾನೆ.

ಚಂದ್ರೋದಯಕೆ ಅಂಬೋಧಿ ಹೆಚ್ಚುವದಯ್ಯಾ
ಚಂದ್ರ ಕುಂದೇ ಕುಂದುವದಯ್ಯಾ
ಚಂದ್ರಂಗೆ ರಾಹು ಅಡ್ಡ ಬಂದಲ್ಲಿ ಬೊಬ್ಬಿಟ್ಟಿತೆ ಅಂಬುಧೀ
ಅಂಬುಧಿಯ ಮುನಿ ಅಘೋಷವ ಕೊಂಡಲ್ಲಿ ಚಂದ್ರಮನಡ್ಡ ಬಂದನೇ?
ಆರಿಗಾರು ಇಲ್ಲ ಕೆಟ್ಟವರಿಗೆ ಕಳೆಯಿಲ್ಲ
ಜಗದ ನಂಟ ನೀನೆ ಅಯ್ಯ ಕೂಡಲಸಂಗಮದೇವ"

ಈ ವಚನದಲ್ಲಿ ಯಾರಿಗೆ ಯಾರು ಉಪಕಾರಿಗಳಿಲ್ಲ ಸ್ನೇಹಿತರಿಲ್ಲ ಎಂದು ವಿವರಿಸಲಾಗಿದೆ. ದುಃಖದಿಂದ ಜೀವಿಗಳನ್ನು ಪಾರು ಮಾಡುವವನು ಪರಮಾತ್ಮನೊಬ್ಬನೇ ಎಂದು ತಿಳಿಸಲಾಗಿದೆ.

ಉದಾಹರಣೆಗಾಗಿ ಚಂದ್ರ ಮತ್ತು ಸಮುದ್ರದ ಸಂಬಂಧವನ್ನು ವಿವರಿಸುತ್ತಾರೆ. ಪೂರ್ಣ ಚಂದ್ರ ಕಂಗೊಳಿಸಿದಾಗ ಸಮುದ್ರವು ಉಕ್ಕುವುದು ಚಂದ್ರನು ಕೃಷ್ಣಪಕ್ಷದಲ್ಲಿ ಕಡಿಮೆ ಆಗುತ್ತಾ ಹೋದಾಗ ಸಮುದ್ರವು ಸಹ ಇಳಿಯುತ್ತಾ ಹೋಗುವುದು. ಇದರಿಂದ ಚಂದ್ರ ಹಾಗೂ ಸಮುದ್ರಗಳಲ್ಲಿ ಸ್ನೇಹವಿದ್ದಂತೆ ಅನಿಸುವದು. ಆದರೆ ಚಂದ್ರಗ್ರಹದಲ್ಲಿ ರಾಹು ಅಡ್ಡ ಬಂದಾಗ ಸಮುದ್ರ ಭೋರ್ಗರೆಯುವಂತೆ ಅಗಸ್ತ್ಯ ಮುನಿಯು ಸಮುದ್ರವನ್ನು ಅಂಗೈಲಿ ಹಿಡಿದು ಕುಡಿದಾಗ ಚಂದ್ರ ಬಂದು ಬಿಡಿಸಿಕೊಳ್ಳಲಿಲ್ಲ. ಹೀಗೆ ಈ ಸಂಸಾರದಲ್ಲಿ ಯಾರಿಗೆ ಯಾರು ಉಪಕಾರಿಗಳಿಲ್ಲ ಇವರೊಂದಿಗೆ ಕೆಟ್ಟವರಿಗೆ ಗೆಳೆತನವಿರುವುದಿಲ್ಲವೆಂದು ಲೋಕಭೀತಿಯನ್ನು ಸಾರಿದ್ದಾರೆ. ಜಗತ್ತಿನಲ್ಲಿ ಎಲ್ಲರ ಸಂಬಂಧವು ಪರಮಾತ್ಮನೊಂದಿಗೆ ಮಾತ್ರವಿರುವುದು ಎಂದಿದ್ದಾರೆ.

ಬಸವಣ್ಣನವರು ಧಾರ್ಮಿಕ ವ್ಯವಸ್ಥೆಯ ಮೂಲವನ್ನೇ ಹಿಡಿದು ಅಲ್ಲಾಡಿಸಿದರು. ಧರ್ಮವನ್ನೆ ಅವರು ನಿರಾಕರಿಸಲಿಲ್ಲ. ಅದರ ಮೇಲೆ ದಟ್ಟವಾಗಿ ಬೆಳೆದು ಪರೋಪಜೀವಿ ಬಂಧನಗಳಂತಿದ್ದ ಸಂಪ್ರದಾಯಗಳನ್ನು ಕತ್ತರಿಸಿ ಹಾಕಿದರು. ಅತ್ಯಂತ ವೈಜ್ಞಾನಿಕವಾದ ವಿಚಾರನಿಷ್ಠೆಯಿಂದ ಅವುಗಳನ್ನು ಕಟುಪರೀಕ್ಷೆಗೆ ಒಳಪಡಿಸಿದರು. ಗಟ್ಟಿಯಾದವುಗಳನ್ನು ಉಳಿಸಿಕೊಂಡು ತಮ್ಮ ಅನುಭಾವದಿಂದ ಅವುಗಳಿಂದ ಹೊಸ ಹೊಳಪನ್ನು ಕೊಟ್ಟರು ಜೊಳ್ಳುಗಳನ್ನು ಜಾಲಾಡಿ ಜೊಂಡುಗಳನ್ನು ಕಿತ್ತೆಸೆದರು. ಅದರಲ್ಲೂ ಮುಖ್ಯವಾಗಿ ಯಜ್ಞಯಾಗಾದಿಗಳು ಮತ್ತು ಅದರ ಸುತ್ತ ಹರಡಿದ್ದ ಶೋಷಣೆಯ ಜಾಲಗಳು ಮೊದಲ ಕರ್ಮಯಜ್ಞಕ್ಕಿಂತ ಜ್ಞಾನದ ಮೂಲಕ ಕೈಗೊಳ್ಳುವ ಅನುಸಂಧಾನವೇ ಶ್ರೇಷ್ಠವೆಂದು ಉಪನಿಷತ್ತುಗಳು ಹೇಳಿದರೂ ಕರ್ಮಗಳ ಪ್ರಾಬಲ್ಯ ನಿಂತಿರಲಿಲ್ಲ. ಧರ್ಮದ ಹೆಸರಿನಲ್ಲಿ ಉತ್ತಮರೆಂದು ಹೇಳಿಕೊಂಡು ಪಶುಬಲಿ ಕೊಡುವುದು. ಬಸವಣ್ಣನವರಿಗೆ ಅಸಹನೆಯನ್ನುಂಟು ಮಾಡಿತ್ತು. ಅದನ್ನು ಶಾಸ್ತ್ರಾಧಾರಗಳಿಂದ ಸಾರೋದ್ಧಾರವಾಗಿ ಬೆಳೆಸಿಕೊಂಡು ಬರುತ್ತಿರುವುದನ್ನು ಕಂಡು ಅವರು ಕೆರಳಿದರು. ವೇದಶಾಸ್ತ್ರಗಳಲ್ಲಿ ಹೇಳಿರುವ ಹಿಂಸಾಚಾರದ ಮಾರ್ಗವನ್ನು ಬಸವಣ್ಣನವರು ಕಟುವಾಗಿ ಖಂಡಿಸುತ್ತಾರೆ.

ಮಾತಿನ ಮಾಂತಿಗೆ ನಿನ್ನ ಕೊಂದಹರೆಂಬ
ಎಲೆ ಹೋತೇ ಅಳು ಕಂಡಾ
ವೇದವನೋದಿದವರ ಮುಂದೆ ಅಳು ಕಂಡಾ!
ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡಾ
ನೀನುತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವಾ

ವೇದಗಳಲ್ಲಿ ಹೇಳಿವೆ ಎಂದು ನಿಷ್ಕರಣವಾಗಿ ನಿನ್ನನು ಕೊಲ್ಲುತ್ತಾರೆ. ಅದಕ್ಕಾಗಿ ವೇದವನೋದಿದವರ ಮುಂದೆ ನೀನು ಅಳು. ಶಾಸ್ತ್ರವನೋದಿದವರ ನೀನು ಅಳು. ನೀನು ಅತ್ತ ಮಾತ್ರಕ್ಕೆ ಮನಕರಗಿ ನಿನ್ನನ್ನು ಅವರು ಬಿಡುವವರಲ್ಲ. ಆದರೆ ನೀನುತ್ತುದಕ್ಕೆ ತಕ್ಕ ಫಲ ಅವರು ಪಡೆಯಲೇಬೇಕಾಗುತ್ತದೆ.

ನಿಮ್ಮ ವಚನ ಪುಣ್ಯವೆಂಬುದು ಹುಸಿಯಾಯಿತು ನೋಡಾ
ಶಾಸ್ತ್ರದ ವಚನ ಹೋತಿಂಗೆ ಮಾರಿ
ಎಂತು ನಂಬುವೆನಯ್ಯಾ?
ನಾನು ಕೊಲ್ಲೆ ನೇಣು ಕೊಂದಿತ್ತೆಂಬ ಸೊನೆಗಾರನೇನೆಂಬೆ
ಕೂಡಲಸಂಗಮದೇವಾ

ಯಜ್ಞಯಾಗಾದಿಗಳಲ್ಲಿ ಪಶುವಧೆ ಮಾಡುವವರನ್ನು ಕಟುಕರು ಎಂದ ಬಸವಣ್ಣ ಕರೆಯುತ್ತಾರೆ. ಇವರ ಜೊತೆಗೆ ಇಷ್ಟು ಖಂಡನೀಯವಾಗಿ ಅವರಿಗೆ ಕಂಡದ್ದು ಯಜ್ಞದ ಬೆಂಕಿಯಲ್ಲಿ ಸುರಿಯುವ ಹಾಲು ತುಪ್ಪ ಮೊದಲಾದ ಆಹಾರ ಪದಾರ್ಥಗಳ ದುರ್ವ್ಯಯ ಅಮೂಲ್ಯವಾದ ಆಹಾರವಸ್ತುಗಳನ್ನು ಸುಡುವುದು ವಿರೋಧಿಸಿ ವೈಚಾರಿಕ ಪ್ರತಿಭಟನೆಯಿಂದ ಸಮಸ್ಯೆ ಮನಸ್ಸನ್ನು ಅದರ ವಿರುದ್ಧ ತಿರುಗಿಸಲು ಪ್ರಯತ್ನಿಸಿದರು. ಬೆಂಕಿಯೇ ದೈವವೆಂದು ನಂಬಿದವರನ್ನು ವಿಡಂಬಿಸದ ಬಸವಣ್ಣನವರು ಅವರ ಭಕ್ತಿಯನ್ನು ಕಂಡುಕೋಪಗೊಂಡರು.

ಹಾರುವ ಭಕ್ತಿ ಓದಿನೊಳಗೆ ಅಗೆಯ ಹೊಯ್ದಂತೆ!
ಕಳಯಂತೆ ಬೇರೊಂದು ಮೇಲೆ ಫಲವಾಗದು!
ಪ್ರಾಣಲಿಂಗದ ಪ್ರಸಾದನ ಮುಂದಿಟ್ಟುಕೊಂಡು
'ಪ್ರಾಣಾಯ ಸ್ವಾಹಾ, ಸಮಾನಾಯಸ್ವಾಹಾ' ಎಂದ
ಕರ್ಮಿಗಳನೇನೆಂಬೆ ಕೂಡಲಸಂಗಮದೇವಾ?

ಇಲ್ಲಿ ಗಮನಿಸಬೇಕಾದ ಮುಖ್ಯವಾದ ಮಾತು ಪ್ರಾಣಧಾರಣೆಗೆ ಅಗತ್ಯವಾದ ಪ್ರಸಾದವನ್ನು ಮುಂದಿಟ್ಟುಕೊಂಡು ಅದನ್ನು ಬೆಂಕಿಗೆ ಹಾಕಿ ಸುತ್ತುತ್ತಿರುವ ಚಿತ್ರವನ್ನು ಕುರಿತದ್ದು. ಆಹಾರವನ್ನು ಬಹಳ ಪವಿತ್ರ ಭಾವನೆಯಿಂದ ಕಾಣುವ ಬಸವಣ್ಣನವರು ಅದನ್ನು ಬೆಂಕಿಗೆ ಸುಡುವುದನ್ನು ಕಂಡು ಸಹಿಸದಾದರು. ಮಹಾಯಜ್ಞಗಳದ್ದು ಉನ್ನತಮಟ್ಟದ ಶೋಷಣೆಯಾದರೆ ದೇವಾಲಯಗಳಲ್ಲಿ ನಡೆಯುತ್ತಿದ್ದ ನಿತ್ಯ ಹೋಮ ಹವನಾದಿಗಳುಪೂಜಾಪರಿರ್ಮಗಳು ಜನಸಾಮಾನ್ಯರನ್ನು ದಿನದಿನವೂ ಶೋಷಿಸುವ ವ್ಯವಸ್ಥೆಯನ್ನು ಮಾಡಿಕೊಂಡಿದ್ದವು.

ಧರ್ಮವನ್ನು ದೇವಾಲಯಗಳಿಂದ ಹೊರಗೆ ತಂದದ್ದು ಬಸವಣ್ಣನವರ ಮಹಾಸಾಧನೆ ದೇವಾಲಯಗಳು ಅಂದಿನ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದವು. ಹಬ್ಬಹರಿದಿನಗಳಲ್ಲಿ ಜನ ಒಟ್ಟಾಗಿ ಸೇರುವ ಗ್ರಾಮ ಕೇಂದ್ರಗಳಾಗಿದ್ದವು. ಜೊತೆಗೆ ದೇವಾಲಯಗಳು ಅತಿಯಾಗಿ ಬೆಳೆದು ಪುರೋಹಿತಶಾಹಿಯು ಆಶ್ರಯ ಸ್ಥಾನಗಳೂ ಆಗಿದ್ದವು. ಶ್ರೀಮಂತಿಕೆಯ ಆಗರಗಳಾಗಿ ಎಲ್ಲ ಬಗೆಯ ಅಧಃಪತನಕ್ಕೆ ಕಾರಣವಾಗಿದ್ದವು. ಕಲೆ ನೆಪದಿಂದ ಪ್ರಾರಂಭವಾದ ನರ್ತಕಿಯರ ಸೇವೆ ದೇವದಾಸಿ ಪದ್ಧತಿಯಾಗಿ ಬೆಳೆದು ದೇವಾಲಯಗಳನ್ನು ಕಲುಷಿತಗೊಳಿಸುತ್ತಿತ್ತು.[೧] ಆದಕಾರಣದಿಂದಲೇ ಬಸವಣ್ಣನವರ ಸ್ಥಾವರಕ್ಕೆ ಬದಲಾಗಿ ಜಂಗಮಕ್ಕೆ ಮಹತ್ವಕೊಟ್ಟರು.

ಉಳ್ಳವರು ಶಿವಾಲಯದ ಮಾಡಿಹರು
ನಾನೇನ ಮಾಡುವೆ ಬಡವನಯ್ಯಾ
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಶಿರ ಹೊನ್ನ ಕಲಶವಯ್ಯಾ
ಕೂಡಲಸಂಗಮದೇವಾ ಕೇಳಯ್ಯಾ
ಸ್ಥಾವರಕ್ಕೆ ಅಳಿವುಂಟು ಜಂಗಮಕ್ಕಳಿವಿಲ್ಲ

ಸಮಾಜದ ಕೆಳಗಿನ ಹಂತಗಳಲ್ಲಿ ಧರ್ಮದ ಸ್ಥಿತಿ. ಇನ್ನು ಶೋಚನೀಯ-ವಾಗಿತ್ತು. ಕ್ಷುದ್ರ ದೇವತೆಗಳನ್ನು ಮಾರಿಮಸಣಿಗಳನ್ನು ಬಿರಯ್ಯ, ಕೇತಯ್ಯ ಮೊದಲಾದ ಗ್ರಾಮ ದೇವತೆಗಳನ್ನು ಹಿಂಸಾಚಾರದಿಂದ ನೂರಾರು ಕುರಿಕೋಣಗಳ ಬಲಿಯನ್ನಿತ್ತು. ಪೂಜಿಸುವ ಕ್ರೂರ ಪದ್ಧತಿ ಪ್ರಚಲಿತವಾಗಿತ್ತು. ಅಂಟುಜಾಡ್ಯಗಳೂ ದೇವತೆಗಳಾಗಿದ್ದವು.

---

೧. ವಚನ ಚಳುವಳಿ, ಡಾ. ಎಚ್.ತಿಪ್ಪೇರುದ್ರಸ್ವಾಮಿ, ಪು. ೬೦.

ದೈವಗಳ ನಾನಾ ಸ್ವರೂಪವನ್ನು ತೋರುವ ಅನೇಕ ರಚನೆಗಳನ್ನು ನಾವು ಬಸವಣ್ಣನವರ ವಚನಗಳಲ್ಲಿ ಕಾಣಬಹುದು.

ಒಟ್ಟಿನಲ್ಲಿ ಸ್ವಾತಂತ್ರ್ಯ, ಸರ್ವಸಮಾನತೆ, ಬ್ರಾತೃತ್ವ ನೈತಿಕಪ್ರಜ್ಞೆ ಆದರ್ಶಸಮಾಜ ಮೌಲ್ಯಗಳು ಎನ್ನಬಹುದು. ವರ್ಣನಿರ್ಮೂಲನ, ಕಾಯಕಕ್ಕೆ ಮಹತ್ವ ಸುಳ್ಳು, ಮೋಸ ಮಡಿವಾರಗಳನ್ನು ತೊಡೆದು ಹಾಕುವ ಪ್ರಯತ್ನ ಎದ್ದು ಕಾಣುತ್ತದೆ. ಭಕ್ತಿಗೆ ದಯೆಗೆ ವಿನಯಕ್ಕೆ ಪ್ರಾಶಸ್ತ್ಯ ಕೊಟ್ಟಿರುವುದನ್ನು ಕಾಣುತ್ತೇವೆ. ಇಷ್ಟೆಲ್ಲಾ ಸರ್ವಸಮಾನತೆಯ ಸ್ವಾತಂತ್ರ್ಯ ಸಮಾಜದ ಕನಸು ಕಂಡ ಅವರು ಮತ್ತೊಂದು ಮಾತನ್ನು ಹೇಳಿರುವುದು ತುಂಬಾ ಅರ್ಥವ್ಯಕ್ತಾವಾಗಿದೆ.

ಎಡದ ಕೈಯಲು ಹಾಲ ಬಟ್ಟಲು ಬಲದ ಕೈಯಲು ಓಜುಗಟ್ಟಿಗೆ
ಆವಾಗ ಬಂದನು ನಮ್ಮಯ್ಯ
ಬಡಿದು ಹಾಲ ಕುಡಿಸುವ ತಂದೆ!

ಸಮಾಜವನ್ನು ಸುವ್ಯಸ್ಥಿತ ಸನ್ಮಾರ್ಗದಲ್ಲಿ ನಡೆಸಿಕೊಂಡು ಹೋಗಬೇಕಾದರೆ ಕೇವಲ ಒಳ್ಳೆಯತನ, ಅನುಕಂಪ, ವಾತ್ಸಲ್ಯವೇ ಸಾಕಾಗದು. ಬೆದರಿಸಿ, ಗದರಿಸಿ ಆಳುವ ಸಾತ್ವಿಕ ಆಗ್ರಹದ ದಂಡನೀತಿಯೂ ಬೇಕು. ಇಲ್ಲದಿದ್ದರೆ ಸಮಾಜ ಮಾತು ಕೇಳುವುದಿಲ್ಲ ಎಂಬ ಅರಿವು ಬಸವಣ್ಣನವರಿಗೆ ಮೂಡಿರಬೇಕು.[೧]

ವ್ಯಕ್ತಿಗೆ ಒಂದು ಮುಖವಾದರೆ ವ್ಯಕ್ತಿತ್ವಕ್ಕೆ ಹಲವು ಮುಖಗಳು ಬಸವಣ್ಣನವರು ಬಹುಮುಖಿ ವ್ಯಕ್ತಿತ್ವದ ಕೈಗನ್ನಡಿ ಮರೆತ ಮಾನವರನ್ನು ಎಚ್ಚರಿಸಿದ ಅರಿತ ಶರಣರ ಶ್ರೇಷ್ಠ ಜೀವನದ ಜೀವಂತ ಕೈಪಿಡಿ, ಸರ್ವಸಮಾನತೆ ಅಸ್ಪೃಶ್ಯೋಂದಾರ, ಜಾತಿ, ಲಿಂಗ ಹಾಗೂ ವೃತ್ತಿ ಭೇದ ನಿರಾಕರಣೆ ಕಾಯಕತತ್ವ ಪ್ರತಿಪಾದನೆ, ಮಹಿಳೆಯ ಉನ್ನತಿ ಸಾಮಾಜಿಕ ಸಂಸ್ಕರಣೆಯ ಸಂಘಟನೆ ಹಾಗೂ ಸುಧಾರಣೆಗಳನ್ನು ಕ್ಷಿಪ್ರಕಾಲಾವಧಿಯಲ್ಲಿ ಮಾಡಿದ ಮಹಾಪುರುಷ ಜಗದ್ವ್ಯಾಪಿಯಾದ ಸಾರ್ವಕಾಲಿಕ ತತ್ವಗಳನ್ನು ಸಾರಿದ ವಿಶ್ವಮಾನವ, ಧಾರ್ಮಿಕ ದೃಷ್ಟಿಯ ನೈತಿಕ ನೆಲೆಗಟ್ಟಿನ ಪರಿಶುದ್ಧ ನಡೆ–ನುಡಿಯ ತ್ಯಾಗ–ಭೋಗ ಸಮನ್ವಯದ ದಿವ್ಯ ಜೀವನ ಸಾಗಿಸಿದ ಜಗಜ್ಯೋತಿ, ವಿಶ್ವಪ್ರೇಮ, ವಿಶ್ವಬಾಂಧವ್ಯ ಹಾಗೂ ವಿಶ್ವಮೈತ್ರಿಗಳನ್ನು ನಿರ್ಮಿಸಿದ ವಿಶ್ವಭೂತಿ.[೨]

---

೧. ಬಸವ ಪುರುಷ, ಸಂ. ಹಾ.ಮಾ.ನಾ. ಪು. ೧೬೨.

೨. ಅದೇ, ಪು. ೧೮೫.

ಬಸವಣ್ಣನವರ ವ್ಯಕ್ತಿಗತ ಸಾಧನೆಯನ್ನು ಬಿಟ್ಟು ಅವರ ಸಮಾಜ ಬೋಧನೆಯಲ್ಲಿ ನೈತಿಕ ಪ್ರಜ್ಞೆಯನ್ನು ಕಾಣಬಹುದು. ಬಸವಣ್ಣನವರು ಮುಗಿಲಿಗೇರಿದರೂ ನೆಲವನ್ನು ಮರೆಯದ ಕಾರಣ ಅವರಿಗೆ ವಚನಕಾರರಲ್ಲೇ ಅಪಾರ ಪ್ರಾಶಸ್ತ್ಯದೊರೆತಿದೆ.

# ಉಪಸಂಹಾರ

ಬಸವಣ್ಣ ಸಮಾಜದ ಉದ್ಧಾರವನ್ನು ಬಯಸಿದ ಮಹಾನ್ ಚಿಂತಕರು ಇವರ ವಚನಗಳಲ್ಲಿ ನೈತಿಕ ಪ್ರಜ್ಞೆ ಇಂದಿನ ಭಾರತೀಯ ಸಮಾಜಕ್ಕೆ ತೀರ ಅವಶ್ಯವೆಂದು ತೋರುತ್ತದೆ. ಇಂದಿನ ಭಾರತೀಯ ಸಮಾಜ ಬಸವಣ್ಣನವರ ಆದರ್ಶಗಳನ್ನು ಮುಂದಿಟ್ಟುಕೊಟ್ಟುಕೊಳ್ಳುವುದು ಅವಶ್ಯವಿದೆ. ಅವರ ವಚನಗಳಲ್ಲಿ ಕಾಣುವ ಮಾನವೀಯ ಸ್ಪಂದನೆ ವಿಶ್ವವನ್ನೇ ಬೆರಗುಗೊಳಿಸುತ್ತದೆ. ಸಮಾಜದ ವಿಮರ್ಶೆ, ನೈತಿಕತೆಯ ಪ್ರಜ್ಞೆ, ಮೌಲ್ಯ ಬಸವಣ್ಣನವರ ವಚನಗಳ ಮತ್ತೊಂದು ಮುಖವಾಗಿದೆ. ಅನ್ಯಾಯವನ್ನು ಪ್ರತಿಭಟಿಸುವ ನ್ಯಾಯವನ್ನು ಪ್ರತಿಪಾದಿಸುವ ಅವನದು ರಚನಾತ್ಮಕ ವಿಮರ್ಶೆಯಾಗಿದ್ದು ಅಲ್ಲಿ ಒಬ್ಬ ಸಮಾಜ ವಿಜ್ಞಾನಿಯ ವೈಜ್ಞಾನಿಕ ದೃಷ್ಟಿ ಎಂದು ಕಾಣುತ್ತದೆ.

ಸಮಾಜದ ಲೋಕವನ್ನು ಆತ್ಮಜ್ಞಾನಿಗಳ ವೀರಶೈವ ಪರಿಭಾಷೆಯಲ್ಲಿ ಹೇಳಬೇಕಾದರೆ ಶರಣರ ಅನುಭವ ಮಂಟಪವನ್ನು ಮಾಡಬೇಕೆಂದು ಬಸವಣ್ಣನವರ ಆಕಾಂಕ್ಷೆಯಾಗಿತ್ತು. ಪ್ರತಿಯೊಬ್ಬನೂ ತನ್ನ ಉದರಂಭರಣಕ್ಕೆ ದುಡಿಯಬೇಕು. ದುಡಿದು ತಿನ್ನುವುದರಲ್ಲಿರುವ ಸೌಖ್ಯ ದುಡಿಸಿಕೊಂಡು ತಿನ್ನುವುದರಲ್ಲಿರುವುದಿಲ್ಲ. ದುಡಿದು ಕೂಡ ಪರರಿಗೆ ಅಹಿತವಾಗುವ ರೀತಿಯಲ್ಲಿರಬೇಕೆನ್ನುವುದು ಬಸವಣ್ಣನವರ ವಾದವಾಗಿತ್ತು.

ಬಸವಣ್ಣನವರು ತಮ್ಮ ಚಿತ್ತ ಭಿತ್ತಿಯ ಮೇಲೆ ರೂಪಿಸಿರುವ ಇಂಥ ಸಮಾಜ ನಿರ್ಮಿತವಾಗಿದ್ದರೆ ಜಗತ್ತಿಗೆ ಒಂದು ಭವ್ಯಾದರ್ಶನವನ್ನು ತೋರುತ್ತಿತ್ತೆನ್ನುವುದರಲ್ಲಿ ಸಂದೇಹವಿಲ್ಲ. ಇವರ ಉಪದೇಶ ಕೇವಲ ಸಮಕಾಲೀನವಾಗಿದ್ದಾರೆ ಕೇವಲ ಅಂದಿನ ಪರಿಸ್ಥಿತಿಯನ್ನು ಸುಧಾರಿಸುವ ಉದ್ದೇಶವನ್ನು ಪಡೆದುದಾಗಿದ್ದಾರೆ. ಅದು ಇಂದಿನವರೆಗೆ ಜೀವಂತವಾಗಿ ಉಳಿಯುತ್ತಿರಲಿಲ್ಲ. ಅವರ ಉಪದೇಶಕ್ಕೆ ಪರಂಪರೆಯ ಬೆಂಬಲವೂ ಇದೆ. ಧರ್ಮ ಹಾಗೂ ಲೌಕಿಕ ಜೀವನಗಳೆರಡರಲ್ಲಿಯೂ ಸಾಮ್ಯೋ-ವಾದವನ್ನು ಸ್ಥಾಪಿಸುವ ಬಸವಣ್ಣನವರ ಪ್ರಯತ್ನ ಇಂದು ಮೂತುಫಲಿಸುತ್ತಿರುವುದನ್ನು ನಾವು ನೋಡಬಹುದು. ಅವರು ನೆಟ್ಟ ಸಸಿ ಅವರ ನಿರೀಕ್ಷೆಣೆಯಲ್ಲೂ ಅಧಿಕವಾಗಿ ಬೆಳೆದು ಹೆಮ್ಮರವಾಗುತ್ತಿರುವುದನ್ನು ಕಂಡುಬರುತ್ತದೆ. "ಲಿಂಗ ಭಕ್ತನಾದಿರೆ ಸಾಕು" ಅವನನ್ನು ಕುಲಜನವೆಂದು ಭಾವಿಸುತ್ತೇವೆ. ಅವರ ವಚನಗಳಲ್ಲಿ ಕಾಣುವ ಮಾನವೀಯ ಸ್ಪಂದನೆ ವಿಶ್ವವನೇ ಬೆರಗುಗೊಳಿಸುತ್ತದೆ.

ಇಪ್ಪತ್ತನೆಯ ಶತಮಾನದಲ್ಲಿ ಸರ್ವರ ಮನೋಭಿತ್ತಿಯ ಮೇಲೆ ಮೂಡಿರುವ ವಿಶ್ವ ಕೌಟುಂಬಿಕ ಭಾವನೆ ಇಂದೇ ಹುಟ್ಟಿ ಬೆಳೆದುದಲ್ಲ. ಇದಕ್ಕೆ ಕಾಲ ಕಾಲಗಳಲ್ಲಿ ಹಲವು ಮಹನೀಯರ ಸೇವೆ, ಪೋಷಣೆ ತ್ಯಾಗ ಲಭಿಸಿದೆ. ಅನೇಕ ಸಹಸ್ರ ವರ್ಷಗಳಿಂದ ಬೆಳದು ಬಂದ ವಿಚಾರಧಾರೆ ಇಂದು ಕಳಿತಿದೆ. ಈ ವಿಚಾರಧಾರೆಯ ಪ್ರಾಬಲ್ಯಕ್ಕೆ ಬಸವಣ್ಣನವರು ಬಹುಮುಖ ಸೇವೆಯನ್ನರ್ಪಿಸಿದ್ದಾರೆ. ಅವರ ನಿಷ್ಕಳಂಕ ಜೀವ ನಿರ್ಹೇತುಕ ಸಾಧನಯೋಗ ಅವರ ಅನುಯಾಯಿಗಳಿಗೆ ಮಾತುರವೇ ಅಲ್ಲದೆ ಎಲ್ಲ ಲೋಗರಿಗೂ ಮಾರ್ಗದರ್ಶಿಗಳಾಗುತ್ತಾರೆ.

ಆಧ್ಯಾತ್ಮಿಕ ನೈತಿಕ, ದಾರ್ಶನಿಕ ತತ್ವಗಳನ್ನು ಬುದ್ಧಿಗೋಚರವಾಗುವಂತೆ ಹೇಳಬಹುದು. ಅದಕ್ಕೆ ಬೇಕಾದುದು ಪಾಂಡಿತ್ಯ ಆದರೆ ಮಾನವ ಪ್ರಗತಿಗೆ ಪಾಂಡಿತ್ಯವಷ್ಟೇ ಸಾಕೇ? ಆಚರಣೆಯಿಂದ ಪುಟಗೊಳ್ಳದ ಜ್ಞಾನ ಮರಳುಗಾಡಿನ ಮೃಗಜಲ, ಸಾಧಕನ ಆತ್ಮ ಸಂಸ್ಕೃತವಾಗಬೇಕಾದರೆ ಜ್ಞಾನಶುದ್ಧಿಯ ಜತೆಗೆ ಕ್ರಿಯಾಶುದ್ಧಿಯಾ ಆಗಬೇಕು. ಅದನ್ನು ಬಸವಣ್ಣನವರ ವಚನಗಳಲ್ಲಿ ಜೀವನದ ಮೂಸೆಯಲ್ಲಿ ಬೆಂದು ಬಂದಿರುವ ಅಪರಂಜಿ ಚಿನ್ನ ಅವರ ಪ್ರತಿಯೊಂದು ನುಡಿಯಲ್ಲಿಯೂ ಅನುಭವ ಕಿಡಿ ಚಿಮ್ಮುತ್ತದೆ. ಅವರ ಮಾತು ಅನುಗಾಲಕ್ಕೆ ಅನ್ವಯಿಸುವ ಅವರ ಗುಣ ಪಡೆದಿದೆ. ಇವರ ಉಪದೇಶ ಕೇವಲ ಸಮಕಾಲೀನ-ವಾಗಿದ್ದಾರೆ. ಕೇವಲ ಅಂದಿನ ಪರಿಸ್ಥಿತಿಯನ್ನು ಸುಧಾರಿಸುವ ಉದ್ದೇಶವನ್ನು ಪಡೆದುದಾಗಿದ್ದಾರೆ. ಅದು ಇಂದಿನವರೆಗೆ ಜೀವಂತವಾಗಿ ಉಳಿಯುತ್ತಿರಲಿಲ್ಲ. ಅವರ ಉಪದೇಶಕ್ಕೆ ಪರಂಪರೆಯ ಬೆಂಬಲವೂ ಇದೆ. ಉಪನಿಷತ್ತಿನ ತತ್ವಾರ್ಥವನ್ನು ಆಚರಣೆಯಲ್ಲಿ ತರುವ ಮಹಾ ಸಾಹಸವನ್ನು ಬಸವಣ್ಣನವರೆಸಗಿದರು.

ಆದರ್ಶ ಆಧ್ಯಾತ್ಮಿಕ ಜೀವದ ನಡೆಸುವುದು ಸಾಧಕನಿಗೆಷ್ಟು ಮುಖ್ಯವೋ ಅಷ್ಟೇ ಮುಖ್ಯವಾದುದು ಅದರ್ಾ ಲೌಕಿಕ ಜೀವನ. ಇಹದಲ್ಲಿ ಮನಸ್ಸು ಬಂದಂತೆ ಬಾಳಿ ತನ್ನ ಪರಿಸ್ಥಿತಿಗೆ ಹೊಂದಿಕೊಳ್ಳಲಾಗದ ವ್ಯಕ್ತಿ ಪರಿಸ್ಥಿತಿಯನ್ನೆದುರಿಸಿ ಅದರ ಕಾಳಿಕೆಯನ್ನು ತೊಡೆದು ಶುಭಗತಿಯನ್ನು ಸ್ಥಾಪಿಸಲಾಗದ ವ್ಯಕ್ತಿ ಕಣ್ಣಿಗೆ ಕಾಣದಿರುವ ಲೋಕದ ಸುಖಸಂಪತ್ತನ್ನು ನೆನೆದು ಆತ್ಮವಂಚನೆ ಮಾಡಿಕೊಳ್ಳುತ್ತಾನೆ. ನಾಳಿನ ಬಾಳು ಸ್ವರ್ಗಸದೃಶವಾಗಿರಬೇಕೆಂದು ಬಯಸುವುದಕ್ಕಿಂತ ಇಂದಿನ ಬಾಳೆ ಸ್ವರ್ಗವಾಗಬೇಕೆಂದು ಬಯಸುವುದು ವಿವೇಕಿಯ ಲಕ್ಷಣ. ಅದಕ್ಕಾಗಿ ತ್ರಿಕರಣಪೂರ್ವಕವಾಗಿ ದುಡಿಯುವುದು ಮಾನವಕರ್ತವ್ಯ, ಸತ್ಯದ ನಡೆಯಿಂದ ನುಡಿಯಿಂದ ಮರ್ತ್ಯಲೋಕವನ್ನೇ

ದೇವಲೋಕವನ್ನಾಗಿ ಮಾರ್ಪಡಿಸಬಹುದು. ಮರ್ತ್ಯಲೋಕದ ಮಾನವರು ಮಾನವಪುಂಗವರಾಗಬಹುದು.

ಮರ್ತ್ಯ ಮಾಯೆ ಇದು ಅಸ್ಥಿರ ಇಲ್ಲಿನ ಬಾಳುವೆ ಜೀವನವನ್ನು ಅಧಃಪತನಕ್ಕೆಳೆಯುತ್ತದೆ ಎಂಬ ಪ್ರಸ್ಥವವೇ ನಮ್ಮ ವಿಪರೀತ ನಡೆ, ನುಡಿ ತಿಳುವಳಿಕೆ ಮೂಲಕಾರಣವಾಗಿದೆ. ಆತ್ಮಹಿತವಾದ ಮುಮುಕ್ಷು ತಾನು ನಿಂತ ಸ್ಥಳವನ್ನೆ ಮುಕ್ತ ಕ್ಷೇತ್ರ ಮಾಡಬಲ್ಲ. ಅವನ ನುಡಿಯೇ ವೇದ ಅವನಲ್ಲಿ ಅಂತರ್ಗತವಾದ ಜ್ಞಾನಪ್ರಭೆ ನಿರಪೇಕ್ಷವಾಗಿ ತನ್ನ ಬೆಳಕನ್ನು ಎಲ್ಲೆಡೆಯಲ್ಲಿಯೂ ಚೆಲ್ಲುತ್ತದೆ.

ಇಹಪರಗಳಿಗಿದ್ದ ಅಂತರವನ್ನು ಹೋಗಲಾಡಿಸಿ ಮಾನವ ಜೀವನ ತನ್ನ ಪರಿಪೂರ್ಣತೆಯನ್ನು ಸಾಧಿಸುವುದರ ಕಡೆಗೆ ವಿಶೇಷ ಲಕ್ಷ್ಯಕೊಟ್ಟು ಬಸವಣ್ಣನವರು ಮಹೋಪಕಾರ ಮಾಡಿದ್ದಾರೆ. ಪ್ರಪಂಚದಲ್ಲಿದ್ದು ಪ್ರಪಂಚಕವಾಗದೆ, ಎಲೆಯ ಮೇಲಿನ ಹಿಮಮಣಿಯಂತೆ ಬಾಳುವೆ ನಡೆಸಬೇಕೆಂದು ಒತ್ತಿ ಹೇಳಿದ್ದಾರೆ. ಸಂಸಾರವೆಂಬುದೊಂದು ಗಾಳಿಯ ಸೊಡರು. ಸಿರಿಯೆಂಬುದೊಂದು ಸಂತೆಯ ಮಂದಿ ಕಾಡಬೆಳದಿಂಗಳು ಅದನ್ನೆ ಅನನ್ಯವಾಗಿ ನಂಬಿಕುಳಿತರೆ ನೀರ ಬಟ್ಟುಳಿಕೆ ಕಟ್ಟುಗದ ಕಟ್ಟು ಕೊಟ್ಟು ಸುರಕ್ಷಿತ ಮಾಡಿದಂತಾಗುತ್ತದೆ.

ಬಸವಣ್ಣನವರ ನೈತಿಕ ಪ್ರಜ್ಞೆಯು ಮಹ್ಯಾವಾದುದು. ಅವರು ರೂಪಿಸಲೇಸಗಿದ ಸಮಾಜ. ಸಮಾಜ ಸುಸ್ಥಿರವೂ ಸುಭದ್ರವೂ ಆಗಿರಬೇಕಾದರೆ ಅದು ಜ್ಞಾನ ಸಮಾನತೆ, ಅಂತಃಕರಣದ ಅಸ್ಥಿಭಾರ ಪಡೆದಿರಬೇಕು. ಲೋಕದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಗೂ ಬಾಳುವ ಬದುಕುವ ಅಧಿಕಾರವಿದೆ. ಅವನ ಹುಟ್ಟು ಪ್ರಧಾನವಾದುದಲ್ಲ, ಗುಣಪ್ರಧಾನವಾದುದು. ಜಾತಿಮತಗಳ ಹಿರಿಮೆ ಹುಟ್ಟಿನಿಂದಾಗುವುದಿಲ್ಲ, ಗುಣದಿಂದಾಗುತ್ತದೆ. ಉತ್ತಮ ಕುಲದಲ್ಲಿ ಹುಟ್ಟು ಹೀನ ಆಚಾರ ವಿಚಾರ ಪ್ರವೃತ್ತವಾಗಿರುವವನನ್ನು ಹೀನನೆಂದೇ ಭಾವಿಸಬೇಕು. ಹೀನ ಕುಲದಲ್ಲಿ ಹುಟ್ಟಿ ಉತ್ತಮ ಆಚಾರ ವಿಚಾರ ಪ್ರವೃತ್ತನಾಗಿರುವನನ್ನು ಉತ್ತಮನೆಂದೇ ಭಾವಿಸಬೇಕು ಎಂದ ಬಸವಣ್ಣ ಅದನ್ನು ಸಾಧಿಸಲು ತ್ರಿಕರಣಪೂರ್ವಕವಾಗಿ ಶ್ರಮಿಸಿದರು. ಪ್ರತಿಯೊಬ್ಬನೂ ನ್ಯಾಯಮಾರ್ಗದಲ್ಲಿ ದುಡಿಯಬೇಕು. ದುಡಿದು ತಿನ್ನುವುದರಲ್ಲಿರುವ ಸೌಖ್ಯ ದುಡಿಸಿಕೊಂಡು ತಿನ್ನುವುದರಲ್ಲಿರುವುದಿಲ್ಲ. ದುಡಿಮೆ ಕೂಡ ಪರರಿಗೆ ಅಹಿತವಾಗದ ರೀತಿಯಲ್ಲಿರಬೇಕೆನ್ನುವುದು ಬಸವಣ್ಣನವರ ವಾದವಾಗಿತ್ತು. ಹೊರಗಿನ ಲಾಂಛನ-ಕ್ಕಿಂತಲೂ ಹಿರಿದಾದುದು ಅಂತರಂಗದ ಶುದ್ಧಿ, ಅಂತರಂಗಶುದ್ಧಿಯಿಂದ ಅಲಂಕಾರ.

ಹೆಂಡದ ಮಡಿಕೆಯ ಸಿಂಗರಿಸಿದಂತೆ ಎಂದು ಬಸವಣ್ಣನವರು ನುಡಿದು ಬಾಳ್ವೆಯ ಋಜುತ್ತ್ವದ ಕಡೆಗೆ ಎಲ್ಲರ ಲಕ್ಷ್ಯ ಸೆಳೆದರು.

ಬಸವಣ್ಣನವರ ಉಪದೇಶ ಕೇವಲ ಸಮಕಾಲೀನವಾಗಿದ್ದರೆ, ಕೇವಲ ಅಂದಿನ ಪರಿಸ್ಥಿತಿಯನ್ನು ಸುಧಾರಿಸುವ ಉದ್ದೇಶವನ್ನು ಪಡೆದುದಾಗಿದ್ದರೆ ಅದು ಇಂದಿನವರೆಗೆ ಜೀವನಂತವಾಗಿ ಉಳಿಯುತ್ತಿರಲಿಲ್ಲ. ಅವರ ಉಪದೇಶಕ್ಕೆ ಪರಂಪರೆಯ ಬೆಂಬಲವೂ ಇದೆ. ಉಪನಿಷತ್ತಿನ ತತ್ತ್ವಾರ್ಥವನ್ನು ಆಚರಣೆಯಲ್ಲಿ ತರುವ ಮಹಾ ಸಾಹಸವನ್ನು ಬಸವಣ್ಣನವರೆಸಗಿದರು.

ಅಂದು ಸಂಜೀವನಾಗಿದ್ದ ಉಪದೇಶ ಇಂದಿಗೂ ಸಜೀವವಾಗಿ ಉಳಿದಿದೆ.

ಯಾವ ಮತದವನಾದರೇನು, ಯಾವ ದೇಶದವನಾದರೇನು, ಯಾವ ಲಾಂಛನಧಾರಿಯಾದರೇನು ಸಮ್ಯಜ್ಞಾನಿಯಾಗಿ ಸದ್ಕ್ರಿಯಾವಂತನಾಗಿ, ಸಚ್ಚಾರಿತ್ರ-ನಾದವನನ್ನು ನಾನು ಶರಣನೆಂದು, ಗುರುವೆಂದು ವೀರನೆಂದು ಪೂಜಿಸುತ್ತೇನೆ ಎನ್ನುವ ಪ್ರಾಗತಿಕ ಮನೋಭಾವದೆಡೆಗೆ ಇಂದಿನ ಜಗತ್ತು ಭಾವಿಸುತ್ತಿದೆ. ಇದಕ್ಕೆ ಕಾಲ ಕಾಲಗಳಲ್ಲಿ ಹಲವು ಮಹನೀಯರ ಸೇವೆ ಪೋಷಣೆಗೆ ತ್ಯಾಗ ಲಭಿಸಿದೆ. ಅನೇಕ ಸಹಸ್ರ ವರ್ಷಗಳಿಂದ ಬೆಳೆದು ಬಂದ ವಿಚಾಧಾರೆ ಇಂದು ಕಳಿತಿದೆ. ಈ ವಿಚಾರಧಾರೆಯ ಪ್ರಾಬಲ್ಯಕ್ಕೆ ಬಸವಣ್ಣನವರು ಬಹುಮುಖ ಸೇವೆಯನ್ನರ್ಪಿಸಿದ್ದಾರೆ. ಅವರ ನಿಷ್ಕಳಂಕ ಜೀವನ ನಿರ್ಯಾತುಕ ಸಾಧನಯೋಗ ಅವರ ಅನುಯಾಯಿಗಳಿಗೆ ಮಾತರವೇ ಅಲ್ಲದೆ ಎಲ್ಲ ಲೋಗರಿಗೂ ಮಾರ್ಗದರ್ಶಿಗಳಾಗಿದೆ. ಉದಾರದೃಷ್ಟಿಗೆ ಅನುಗುಣವಾದ ಉದಾತ್ತ ಜೀವನ ನಡೆಸಿ ನಡೆ ನುಡಿಗಳ ಮಹಾಮೇಳವನ್ನು ಸಾಧಿಸಿದ್ದಾರೆ.

ಅವರು ಕಟ್ಟಲೆಳಸಿದ್ದ ಆದರ್ಶ ಸಮಾಜನಿರ್ಮಾಣದ ಕಡೆಗೆ ಅವರ ಅನುಯಾಯಿಗಳು ಲಕ್ಷ್ಯ ಕೊಡಬೇಕು. ಅವರ ಅನುಯಾಯಿಗಳಲ್ಲದವರೂ ಲಕ್ಷ್ಯ ಕೊಡಬೇಕು. ದೇಶದ ಸರ್ವತೋಮುಖವಾದ ಪ್ರಗತಿಯ ಕಡೆಗೆ ಲಕ್ಷ್ಯವಿಟ್ಟುದೆ ಬಸವಣ್ಣನವರ ಹೆಚ್ಚುಗಾರಿಕೆ, ಜೀವನ್ಮುಕ್ತರೂ ಸಹಜಕವಿಗಳೂ ಆಗಿದ್ದಂತೆ ಅವರು ಉಗ್ರ ಸಮಾಜ ಸುಧಾರಕನೂ ರೂಢಿಮೌಢ್ಯದ ಪ್ರಬಲ ವಿರೋದಿಗಳೂ ಆಗಿದ್ದರು. ಕಾಯಕದ ಮನ್ನಣೆ, ಅಸ್ಪೃಶ್ಯೋದ್ದರ, ಸ್ತ್ರೀ ಸಮಾಜದ ಉನ್ನತಿ ಏಕದೇವಪೂಜೆ ಸಮಾನಧರ್ಮ ಸ್ಥಾನಗಳನ್ನು ಆಚರಿಸಿ ಬೋಧಿಸಿದರು.

ಬಸವಣ್ಣನವರು ಇಂದಿನ ಭಾರತೀಯ ಸಮಾಜಕ್ಕೆ ತೀರ ಅವಶ್ಯವೆಂದು ತೋರುತ್ತಾರೆ. ಪತಿತೋದ್ಧಾರಕ್ಕಾಗಿ ಪಣತೊಟ್ಟು ಹೆಣಗುತ್ತಿರುವ ಇಂದಿನ ಭಾರತೀಯ ಸಮಾಜ ಬಸವಣ್ಣನವರ ಆದೇಶಗಳನ್ನು ಮುಂದಿಟ್ಟುಕೊಳ್ಳುವುದು ಅವಶ್ಯವಿದೆ. ಅವರ ವಚನಗಳಲ್ಲಿ ಕಾಣುವ ಮಾನವೀಯ ಸ್ಪಂದನೆ ವಿಶ್ವವನ್ನೇ ಬೆರಗುಗೊಳಿಸುತ್ತದೆ. ಸಮಾಜ ವಿಮರ್ಶೆ ಬಸವಣ್ಣನವರ ವಚನಗಳ ಮತ್ತೊಂದು ಮುಖವಾಗಿದೆ.

ಅನ್ಯಾಯವನ್ನು ಪ್ರತಿಭಟಿಸುವ ನ್ಯಾಯವನ್ನು ಪ್ರತಿಪಾದಿಸುವ ಅವನದ್ದು ರಚನಾತ್ಮಕ ವಿಮರ್ಶೆಯಾಗಿದ್ದು ಅಲ್ಲಿ ಒಬ್ಬ ಸಮಾಜ ವಿಜ್ಞಾನಿಯ ವೈಜ್ಞಾನಿಕ ದೃಷ್ಟಿ ಎದ್ದು ಕಾಣುತ್ತದೆ. ಕೆಲವೊಮ್ಮೆ ಅನ್ಯಾಯವನ್ನು ಸಾಮೋನ್ನಿ ಮಾತನಾಡದೆ "ಅನೀ ಬಿಜ್ಜಳಂಗೆ ಅಂಜುವನೆ ಅಯ್ಯಾ" ಎಂದು ವ್ಯಕ್ತಿಯನ್ನು ಬೆರಳು ಮಾಡಿ ಆಡುವುದು "ಬಿಜ್ಜಳನ ಭಂಡಾರವೆನಗೇಕಯ್ಯಾ" ಎಂದು ತನ್ನ ಮೇಲಿನ ವ್ಯಕ್ತಿಗತ ಆರೋಪವನ್ನು ನಿರಾಕರಿಸುವುದು ಇದರ ಜೊತೆಗೆ 'ದಯವೇ ಧರ್ಮದ ಮೂಲ, ಸತ್ಯವ ನುಡಿವುದೆ ಸ್ವರ್ಗ' ಮೊದಲಾದ ಲೋಕನಿಂದೇಶಗಳಂತೂ ಹೆಜ್ಜೆ, ಹೆಜ್ಜೆಗೂ ಕಳಿಸುತ್ತವೆ. ಹೀಗೆ ಅವನ ಆತ್ಮ, ವಿಮರ್ಶೆ, ಸಮಾಜ ವಿಮರ್ಶೆಯ ವಚನಗಳು ಕ್ರಮವಾಗಿ ಆಧುನಿಕ ನವ್ಯಕಾವ್ಯ, ಬಂಡಾಯದ ಕಾವ್ಯಗಳನ್ನು ನೆನಪಿಸುತ್ತವೆ. ಶಾಂತಿ ಸೌಹಾರ್ಧ ಪ್ರೇಮ ಜೀವ ಕರುಣೆಗಳನ್ನು ಸಾರಿ ವಿಶ್ವಮೈತ್ರಿ, ವಿಶ್ವಶಾಂತಿ, ವಿಶ್ವಪ್ರೇಮಗಳ ಬುನಾದಿಯನ್ನು ಭದ್ರಪಡಿಸಿದವರು. ಲೋಕ ಸಂದೇಶದ ವಚನಗಳು ಭಾವಗೀತೆಗಳಂತೆ ಕಾಣುತ್ತವೆ. ಇಂಥ ಅಭಿವ್ಯಕ್ತಿಗಳಿಂದಾಗಿ ಬಸವಣ್ಣನವರು ಲೋಕದ ಮಾನವನಾಗಿ ಅದೇ ಕಾಲಕ್ಕೆ ಸಮಾಜ ವ್ಯಕ್ತಿಯಾಗಿ ಇಂದಿಗೂ ನಮ್ಮ ಕಣ್ಣ ಮುಂದೆ ಬರುತ್ತಾರೆ.

# ಪರಾಮರ್ಶನ ಗ್ರಂಥಗಳು

೧. ಬಸವಣ್ಣನವರ ವಚನಗಳು: ಡಾ॥ ಎಲ್.ಬಸವರಾಜು, ಗೀತಾಬುಕ್ ಹೌಸ್, ಮೈಸೂರು, ೨೦೦೦.

೨. ಭಕ್ತಿ ಭಂಡಾರಿ ಬಸವಣ್ಣನವರ ವಚನಗಳು: ಡಾ. ಆರ್.ಸಿ.ಹಿರೇಮಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೯೮.

೩. ಬಸವಣ್ಣನವರ ವಚನಗಳು: ಡಾ. ಎಂ.ಎಂ.ಕಲಬುರ್ಗಿ, ಸಂಪುಟ-೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೭.

೪. ಬಸವಪುರುಷ ಡಾ. ಹಾ.ಮಾ.ನಾಯಕ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೫.

೫. ಬಸವ ವಚನಾಮೃತ: ಡಾ. ಎಲ್.ಬಸವರಾಜು, ಬಸವ ಸಮಿತಿ, ಬೆಂಗಳೂರು, ೧೯೬೬.

೬. ಬಸವ ಪಥ: ಬಸವ ಸಮಿತಿ, ಶ್ರೀ ಬಸವೇಶ್ವರ ವೃತ್ತ, ಬೆಂಗಳೂರು, ೨೦೦೫.

೭. ಅ.ನ.ಕೃ ಅವರ ಸಮಗ್ರ ವೀರಶೈವ ಸಾಹಿತ್ಯ, ಡಾ. ಅ.ನ.ಕೃಷ್ಣರಾಯ, ಸಾಗರ್ ಪ್ರಕಾಶನ, ಬೆಂಗಳೂರು, ೨೦೦೮.

೮. ಬಸವಣ್ಣನವರ ಷಟ್ಸ್ಥಲದ ವಚನಗಳು, ಸಂಪಾದಕ: ಡಾ॥ ಎಲ್.ಬಸವರಾಜು, ಶ್ರೀ ಶರಣಬಸವೇಶ್ವರ ಗ್ರಂಥ ವಿಶ್ವವಿದ್ಯಾನಿಲಯ, ಗುಲ್ಬರ್ಗಾ, ೧೯೯೦.

೯. ಶ್ರೀ ಬಸವಣ್ಣನವರ ವಚನ ಸಂಗ್ರಹ (ತೃತೀಯ ಆವೃತಿ) ಸಾಹಿತ್ಯ ಅಕಾಡೆಮಿ, ಹೊಸದೆಹಲಿ.

೧೦. ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೨, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೧. ಬಸವಣ್ಣನವರ ವಚನಗಳು, ಶಾಸ್ತ್ರೀ ಜಿ.ವಿ. (೧೯೯೯), ಗದಗ ಪ್ರಕಾಶನ, ವೀರು ಪ್ರಕಾಶನ, ಗದಗ.

೧೨. ಕಲಬುರ್ಗಿ ಎಂ.ಎ. (೨೦೦೦), ವಚನ ಸಂಪುಟ, ಧಾರವಾಡ, ವಿದ್ಯಾಪ್ರಕಾಶನ.

೧೩. ಗುಂಜೆಟ್ಟಿ ವಿ.ವಿ.ಹೆಗಡೆ, ಜಿ.ಎಂ.ಸೀಗೇಹಳ್ಳಿ ಬಿ.(೨೦೦೧), ಆಧುನಿಕ ವಚನ ಸಾಹಿತ್ಯ, ಧಾರವಾಡ, ಮನೋಹರ ಮುದ್ರಣಾಲಯ.

೧೪. ನಾರಾಯಣ.ಪಿ.ವಿ. (೧೯೮೨), ವಚನಸಾಹಿತ್ಯದ ಒಂದು ಸಾಂಸ್ಕೃತಿಕ ಅಧ್ಯಯನ, ಗದಗ, ವೀರಶೈವ ಅಧ್ಯಯನ ಸಂಸ್ಥೆ.

೧೫. ಕರಿಮನಿ.ಸಿ.ವಿ.(೨೦೦೧) ವಚನಸಾಹಿತ್ಯ ದರ್ಶನ, ಲಕ್ಷ್ಮೇಶ್ವರ ಸೋಮೇಶ್ವರ ಪ್ರಕಾಶನ.

೧೬. ಕಾವ್ಯಪ್ರೇಮಿ(೧೯೮೯), ಅಲ್ಲಮನ ವಚನ ಸುಧೆ, ಧಾರವಾಡ, ಸಮಾಜ ಪುಸ್ತಕಾಲಯ.

೧೭. ಶ್ರೀ ಮಹಾಂತಪ್ಪಗಳು (೧೯೮೮), ಬಸವಣ್ಣನವರ ವಚನಗಳು, ಧಾರವಾಡ, ಶ್ರೀ ಮಹಾಂತಪ್ಪಗಳು, ಗುರು ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು, ಶ್ರೀ ಮುರುಘಾಮಠ.

೧೮. ಹಿರೇಮಠ.ಎನ್.ಎಂ. (೨೦೦೭), ವೀರಶೈವದರ್ಶನ ಸಂಸ್ಕೃತಿ, ಗದಗ, ವಿದ್ಯಾನಿಧಿ ಪ್ರಕಾಶನ.

೧೯. ಹಳಕಟ್ಟಿ ಫ.ಗು. (೨೦೦೮), ಬಸವೇಶ್ವರ ವಚನಗಳು, ಸಮಗ್ರ ಸಾಹಿತ್ಯ ಸಂಪುಟ–೧, ಬೆಂಗಳೂರು ಶ್ರೀ ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್.

೨೦. ನರಸಿಂಹಾಚಾರ್ಯ.ಆರ್(೧೯೯೮), ಕರ್ನಾಟಕ ಕವಿಚರಿತ್ರೆ, ಸಂಪುಟ–೧, ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್.

೨೧. ಬಸವಣ್ಣನವರ ದೇವರು, ರಂಜಾನ್ ದರ್ಗಾ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೫.

೨೨. ಪ್ರಸಾದ ಸಂಪಾದಕರು ಡಾ. ಹೆಚ್.ತಿಪ್ಪೇರುದ್ರಸ್ವಾಮಿ ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲ, ಮೈಸೂರು, ೧೯೯೪.

*****